

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಪದವಿ ನಿಬಂಧ

# ಸಿ.ಎಸ್. ದ್ವಾರಕಾನಾಥ ಅವರ ಪ್ರವಾಸ ಕಥನಗಳ ಸಾಂಸ್ಕೃತಿಕ ಅಧ್ಯಯನ

ಸಂಶೋಧನ ವಿದ್ಯಾರ್ಥಿ
**ವಸಂತ್‌ಕುಮಾರಿ ಬಿ.ಎಸ್.**

ಮಾರ್ಗದರ್ಶಕರು
**ಡಾ|| ಎಚ್.ಎ. ಸತ್ಯವತಿ**



ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬೆಂಗಳೂರು
2012



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಪದವಿ ನಿಬಂಧ

# ಸಿ.ಎಸ್. ದ್ವಾರಕಾನಾಥ ಅವರ ಪ್ರವಾಸ ಕಥನಗಳ ಸಾಂಸ್ಕೃತಿಕ ಅಧ್ಯಯನ

ಸಂಶೋಧನ ವಿದ್ಯಾರ್ಥಿ

**ವಸಂತ್‌ಕುಮಾರಿ ಬಿ.ಎಸ್.**

ಮಾರ್ಗದರ್ಶಕರು

**ಡಾ|| ಎಚ್.ಎ. ಸತ್ಯವತಿ**



ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

2012

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2011-2012 ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಸಿ.ಎಸ್. ದ್ವಾರಕಾನಾಥ್ ಅವರ ಪ್ರವಾಸ ಕಥನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ನಿಬಂಧವನ್ನು ವಸಂತಕುಮಾರಿ ಬಿ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧವು ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ಎಚ್. ಎ. ಸತ್ಯವತಿ

ಡಾ. ಎಚ್.ಎ. ಸತ್ಯವತಿ

ದಿನಾಂಕ : ೨೧-೬-೨೦೧೨

ಸ್ಥಳ : ಬೆಂಗಳೂರು

ಡಾ॥ ಎಚ್. ಎ. ಸತ್ಯವತಿ
ಬಿ. ಎ. (ಆನರ್ಸ್) ಎಂ.ಎ., ಪಿ. ಎಚ್. ಡಿ.
ಮುಖ್ಯಸ್ಥರು, ಕನ್ನಡ ವಿಭಾಗ
ಶ್ರೀ ಜಗದ್ಗುರು ರೇಣುಕಾಚಾರ್ಯ [illegible]
ವಾಣಿಜ್ಯ [illegible]
ರೇಸ್‌ಕೋರ್ಸ್ ರಸ್ತೆ, [illegible] 009

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2011-2012 ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಸಿ.ಎಸ್. ದ್ವಾರಕಾನಾಥ್ ಅವರ ಪ್ರವಾಸ ಕಥನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ನಿಬಂಧವನ್ನು ಡಾ. ಎಚ್.ಎ. ಸತ್ಯವತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟ ಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ವಸಂತ ಕುಮಾರಿ.ಬಿ.ಎಸ್

ದಿನಾಂಕ : 21-6-2012 [ವಸಂತ ಕುಮಾರಿ ಬಿ.ಎಸ್]

ಸ್ಥಳ : ಬೆಂಗಳೂರು ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

## ಪೀಠಿಕೆ

ಪ್ರವಾಸ ಮನೋಲ್ಲಾಸವನ್ನುಂಟು ಮಾಡುವ ಪ್ರಕ್ರಿಯೆ, ಮನುಷ್ಯನ ಸಹಜಕ್ರಿಯೆ. ನಾಗರೀಕನಾದ ಮೇಲು ತನ್ನ ಪ್ರಕ್ರಿಯೆಯನ್ನು ಮಾನವ ಮುಂದುವರೆಸಿಕೊಂಡು ಬಂದಿದ್ದಾನೆ. ಪ್ರವಾಸಕ್ಕೆ ಮುಖ್ಯ ಕಾರಣ ಕುತೂಹಲ. ಈ ಕುತೂಹಲವೇ ಭೌಗೋಳಿಕ ಅನ್ವೇಷಣೆಗೆ ಕಾರಣವಾಯಿತು. ಮಾರ್ಕೋಪೋಲೋ, ಮೆಗಲಾನಿಯಂತವರು ವಿಶ್ವ ಪರ್ಯಟನೆಯನ್ನು ಮಾಡಿದರು. ಇದರಿಂದ ಬಾವಿಯೊಳಗಿದ್ದ ಮನುಷ್ಯ ಸಮುದ್ರವನ್ನು ನೋಡುವಂತಾಯಿತು. ಕುವೆಂಪು "ಮನುಷ್ಯನ ಆತ್ಮದಲ್ಲಿಯೇ ಯಾತ್ರೆಯ ತುಡಿತವಿದೆ" ಎನ್ನುತ್ತಾರೆ. ಪ್ರವಾಸ ನಮಗೆ ಜೀವನಾನುಭವ, ಶಿಕ್ಷಣವನ್ನು ನೀಡುತ್ತದೆ. ಹಾಗಾಗಿ ದೇಶಾಟನೆಯು ಜೀವನದ ಒಂದು ಉದ್ದೇಶವಾಗಿದೆ. ವಿದ್ಯಾರ್ಥಿಯಾದವರು ವಿದ್ಯೆಯನ್ನು ಅರಸಿ ದೇಶ ಸಂಚಾರವನ್ನು ಮಾಡುತ್ತಿದ್ದರು. ಈ ರೀತಿಯ ದೇಶ ಸಂಚಾರದ ನಂತರವೇ ಆತನ ವಿದ್ಯಾಭ್ಯಾಸ ಪೂರ್ಣಗೊಳ್ಳುತ್ತಿದ್ದದ್ದು. ಇದು ನಮ್ಮ ಶಿಕ್ಷಣದ ಒಂದು ಅಂಗವೇ ಆಗಿತ್ತು. ಅನುಕೂಲಗಳಿಲ್ಲದ ಕಾಲದಲ್ಲಿಯೇ ಪ್ರವಾಸ ಮಾಡಿ ಬೇರೆ ಬೇರೆ ಪ್ರದೇಶಗಳ ಜನರ ಸಂಸ್ಕೃತಿ ನಡೆನುಡಿ ಜೀವನ ಕ್ರಮವನ್ನು ಅರಿತುಕೊಳ್ಳುವ ಪ್ರಯತ್ನವನ್ನು ಅನೇಕರು ಮಾಡಿದ್ದಾರೆ. ಆ ಕಾಲದಲ್ಲಿ ಪ್ರವಾಸ ಕೈಗೊಳ್ಳುತ್ತಿದ್ದವರು ಜೀವನದ ತಮ್ಮೆಲ್ಲಾ ಜವಾಬ್ದಾರಿಗಳನ್ನು ಮುಗಿಸಿಕೊಂಡೇ ಯಾತ್ರೆಗೆ ಹೊರಡುತ್ತಿದ್ದರು. ಕಾರಣ ತಾವು ಮತ್ತೆ ಹಿಂತಿರುಗಿ ಬರುತ್ತೇವೆಂಬ ಭರವಸೆ ಅವರಿಗಿರಲಿಲ್ಲ.

ಆಧುನಿಕ ಕಾಲದಲ್ಲಿ ಅನುಕೂಲಗಳಿರುವುದರಿಂದ ಪ್ರವಾಸ ಮಾಡುವವರ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಲೇ ಇದೆ. ಜಿ.ಎಸ್. ಶಿವರುದ್ರಪ್ಪನವರ ಪ್ರಕಾರ 'ಮನುಷ್ಯ ಮತ್ತು ನಿಸರ್ಗದ ನಡುವಿನ ಸಂಬಂಧ, ನಾಗರಿಕತೆಯಿಂದ ಬಿರುಕು ಬಿಟ್ಟು, ಕಂದಕವೇರ್ಪಟ್ಟಿದೆ. ಹಾಗಾಗಿ ಈ ಸಂಬಂಧಗಳ ಮರುಸ್ಥಾಪನೆಯ ಪ್ರಯತ್ನವೇ ತೀರ್ಥಯಾತ್ರೆ'

'ನೀನು ಮನುಷ್ಯನಾಗಿಯೇ ಉಳಿಯಲಿಚ್ಛಿಸಿದರೆ ದಿವ್ಯ ಕಾವ್ಯಗಳನ್ನಾದರೂ ಓದು', ಇಲ್ಲವೆ ದೇಶಗಳನ್ನಾದರೂ ಸಂದರ್ಶಿಸಿ ಬಾ' ಎಂದು ಬಲ್ಲವರು ಹೇಳುತ್ತಾರೆ ಬೇಕನ್‌ನ ಪ್ರಕಾರ "ಚಿಕ್ಕವರಿಗೆ ಪ್ರವಾಸ ಒಂದು ಶಿಕ್ಷಣ, ದೊಡ್ಡವರಿಗೆ ಒಂದು ಅನುಭವ" ಕೆಲವರಿಗೆ ಅಲೆಯುವುದೇ ಸ್ವಭಾವ. ಆರ್.ಎಲ್. ಸ್ಟೀವನ್‌ಸನ್ "ನನ್ನ ಮಟ್ಟಿಗೆ ಹೇಳುವುದಾದರೆ ಎಲ್ಲಿಗಾದರೂ ಹೋಗಬೇಕೆಂದು ಪ್ರವಾಸದ ಮಾಡುವುದಿಲ್ಲ. ಹೋಗುವುದು ನನಗೆ ಮುಖ್ಯ. ಪ್ರವಾಸಕ್ಕಾಗಿ ಪ್ರವಾಸ ಮಾಡುತ್ತೇನೆ, ದಿ ಗ್ರೇಟ್ ಅಫೇರ್ ಈಸ್ ಟು ಮೂವ್" ಎನ್ನುತ್ತಾರೆ. ಇದು ಮನುಷ್ಯನ ಸಹಜ ಕ್ರಿಯೆಯಾಗಿರುವುದರಿಂದ "ಮನುಷ್ಯ ತನಗೆ ಬೇಕಾದದ್ದನ್ನು ಹುಡುಕುತ್ತಾ ಪ್ರಪಂಚವೆಲ್ಲಾ ಸುತ್ತುತ್ತಾನೆ. ಮನೆಗೆ ಹಿಂದಿರುಗಿ ಅದನ್ನು ಕಾಣುತ್ತಾನೆ."ಎಂದು ಜಾರ್ಜ್ ಮೂರ್ ಹೇಳಿದ್ದಾನೆ. ಈ ಕಾಣುವ ಬಗೆಯೇ ಮನುಷ್ಯನಲ್ಲಿ ಪ್ರವಾಸ ಮಾಡಲೇ ಬೇಕೆಂಬ ಉತ್ಕಟತೆಯನ್ನುಂಟು ಮಾಡುತ್ತದೆ.

ಇತ್ತೀಚೆಗೆ ಪ್ರವಾಸದ ಉತ್ಕಟತೆ ಜನರಲ್ಲಿ ಹೆಚ್ಚಾಗಿ, ಪ್ರವಾಸ ಮಾಡುವವರ ಸಂಖ್ಯೆ ಹೆಚ್ಚಾಗಿರುವುದರಿಂದ 'ಪ್ರವಾಸೋದ್ಯಮ' ಹುಟ್ಟಿ ಕೊಂಡಿದೆ. ಪ್ರವಾಸಿಗರಿಂದ ದೇಶದ ಆರ್ಥಿಕತೆ ಹೆಚ್ಚಾಗುವ ಕಾರಣ ಎಲ್ಲಾ ದೇಶದ ಸರ್ಕಾರಗಳು ತಮ್ಮ ದೇಶದೆಡೆಗೆ ಪ್ರವಾಸಿಗರನ್ನು ಆಕರ್ಷಿಸುವ ಕೆಲಸವನ್ನು ಮಾಡುತ್ತಿವೆ. ಆದರೆ ಈ ಆಕರ್ಷಣಾ ಕೆಲಸಗಳು ಸಂಸ್ಕೃತಿಯ ಚೌಕಟ್ಟಿನ ಒಳಗೆ ನಡೆಯಬೇಕೆ ಹೊರತು ಅದರ ಎಲ್ಲೆಯನ್ನು ಮೀರಬಾರದು. ಪ್ರವಾಸಿ ತಾಣಗಳು ಐತಿಹಾಸಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಭಿತ್ತಿಯಾಗಿದ್ದಾಗ ಪ್ರವಾಸಿಗರನ್ನು ತನ್ನೆಡೆಗೆ ತಾನೇ ಆಕರ್ಷಿಸುತ್ತವೆ. ಅದಕ್ಕಾಗಿ ಅಸಂಬದ್ಧವಾದ 'ರೇವು ಪಾರ್ಟಿ'ಗಳಂತ ಆಕರ್ಷಣಾ ವಿಧಾನದ ಅವಶ್ಯಕತೆ ಉಂಟೆ? ಎಂದೆನಿಸುತ್ತವೆ.

ಅದು ಹೇಗೆ ಇರಲಿ, 'ದೇಶ ಸುತ್ತಿ ನೋಡು ಕೋಶ ಓದಿನೋಡು' ಎಂಬ ಗಾದೆ ಸರ್ವಕಾಲದಲ್ಲೂ ವೇದ್ಯ. ಸಾಮಾನ್ಯ ಮನುಷ್ಯನ ಲೋಕಜ್ಞಾನ, ಅನುಭವಗಳು ವಿಸ್ತಾರಗೊಳ್ಳುವುದು ಪುಸ್ತಕ ಓದುವುದರ ಮೂಲಕ ಇಲ್ಲವೇ ದೇಶ ಸಂಚಾರ ಮಾಡುವುದರ ಮೂಲಕ. "ಯಾವನು ದೇಶ ದೇಶ ಸಂಚರಿಸುವನೋ, ಪಂಡಿತರ ಸಹವಾಸ ಇಟ್ಟುಕೊಳ್ಳುವನೋ ಅವನ ಬುದ್ಧಿಯು ನೀರಿನಲ್ಲಿ ಬಿದ್ದ ಎಣ್ಣೆಯಂತೆ ಪ್ರಸರಣ ಹೊಂದುತ್ತ ಬಲಿಯುತ್ತ ಹೋಗುವುದು" ಎಂದು ಮಹಾಭಾರತದಲ್ಲಿ ಉಲ್ಲೇಖಿಸಲಾಗಿದೆ. ಆದ್ದರಿಂದಲೇ ಕೋಶ ಓದುವುದಕ್ಕಿಂತ ಹೆಚ್ಚಾಗಿ ದೇಶ ಸಂಚಾರ ಮಾಡುವುದರಿಂದ ಜ್ಞಾನದ ಪರಿಧಿ ಹೆಚ್ಚುವುದಲ್ಲದೆ, ಅನೇಕ ತಾತ್ವಿಕ ಹೊಳಹುಗಳನ್ನು ನೀಡುತ್ತದೆ. ಅನಟೋಲ್ ಫ್ರಾನ್" "ಪ್ರವಾಸವೆಂದರೆ ಕೇವಲ ಜಾಗ ಬದಲಾವಣೆ ಅಲ್ಲವೇ ಅಲ್ಲ, ನಿಮ್ಮ ಅಭಿಪ್ರಾಯಗಳನ್ನೂ, ಪೂರ್ವಗ್ರಹಗಳನ್ನೂ ಬದಲಾಯಿಸುವುದೇ ಪ್ರವಾಸ" ಎಂದಿದ್ದಾನೆ. ಈ ರೀತಿ ತಮ್ಮ ಜ್ಞಾನಕೋಶವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿಯೋ ದೇಶ-ವಿದೇಶ ಪ್ರವಾಸಗಳನ್ನು ಕೈಗೊಂಡು ತಮ್ಮ ಅನುಭವದ ಬುತ್ತಿಯನ್ನು ಇತರರಿಗೆ ಉಣಿಸುವುದೇ ಪ್ರವಾಸ ಕಥನವಾಗಿದೆ.

ಪ್ರವಾಸ ಮಾಡುವುದು ಸುಲಭ, ಆದರೆ ಉತ್ತಮ ಪ್ರವಾಸ ಕಥನವನ್ನು ಬರೆಯುವುದು ಕಷ್ಟ. ಪ್ರವಾಸ ಮಾಡುವ ಪ್ರವಾಸಿಗನಿಗೆ ಇರಬೇಕಾದ ಅರ್ಹತೇ ಎರಡೇ, ಒಂದು ಆಸಕ್ತಿ ಮತ್ತೊಂದು ಹಣ. ಆದರೆ ಪ್ರವಾಸ ಕಥನ ಬರೆಯುವ ಲೇಖಕನಿಗೆ ಆಸಕ್ತಿ, ಹಣ ಇವಿಷ್ಟೇ ಇದ್ದರೆ ಸಾಲದು ಅದರ ಜೊತೆ ಕುತೂಹಲ, ಮಾಹಿತಿ ಸಂಗ್ರಹಿಸುವ ಕಲೆ, ಇತಿಹಾಸದ ಜ್ಞಾನ, ಭೂಗೋಳದ ಪರಿಚಯ, ಬದುಕಿನ ವೈವಿಧ್ಯತೆಯನ್ನು ಗ್ರಹಿಸುವ ಅದನ್ನು ಸಮಚಿತ್ತದೊಂದಿಗೆ ಸ್ವೀಕರಿಸುವ ಶಕ್ತಿ, ಎಲ್ಲರೊಡನೆ ಬೆರೆಯುವ ಗುಣ ಹಾಗೂ ಬರೆಯುವ ಶಕ್ತಿ ಇರಬೇಕು. ಬರೆಯುವಾಗ ಯಾವುದನ್ನು ಬರೆಯಬೇಕು ಯಾವುದನ್ನು ಬಿಡಬೇಕೆಂಬ ತಾರತಮ್ಯಜ್ಞಾನವಿರ ಬೇಕು. ಇಲ್ಲದಿದ್ದರೆ ಕಥನವು ನೀರಸವಾಗುವ ಸಂಭವ ಹೆಚ್ಚು.

ಪ್ರವಾಸ ಕಥನಕಾರನಿಗೆ ಸೂಕ್ಷ್ಮಸಂವೇದನೆ, ಅಂತರ್‌ದೃಷ್ಟಿ ಇಲ್ಲದಿದ್ದರೆ ಉತ್ತಮ ಪ್ರವಾಸ

ಕಥನವಾಗುವುದಿಲ್ಲ. ಎನ್.ಎಸ್. ತಾರಾನಾಥರು ಪ್ರವಾಸ ಕಥನವನ್ನು ಸೃಜನೇತರ ಸಾಹಿತ್ಯವೆಂದು ಕರೆದಿದ್ದಾರೆ. ಆದರೆ ದಿನಚರಿಗಳ ಆಧಾರದಿಂದ ನೆನಪಿಸಿಕೊಂಡು ನಿರೂಪಿಸುತ್ತಾ ಹೋಗುವ ಈ ಪ್ರಕ್ರಿಯೆ ಎಷ್ಟೇ ವಾಸ್ತವ ವಿವರಗಳ ನಿರೂಪಣೆಯಾಗಿದ್ದರು ನಡೆದ ಘಟನೆ, ನೋಟ, ಭಾವ ಸ್ಪಂದನೆಗಳು ವೈಯಕ್ತಿಕವಾದ ಸೃಜನಾತ್ಮಕ ಪ್ರತಿಸ್ಪಂದನವಾಗಿ ನಿರೂಪಿತವಾಗುತ್ತದೆ. ಕಾರಂತರ ಕೃತಿಗಳನ್ನು ಎ.ಎನ್.ಮೂರ್ತಿರಾಯರ 'ಅಪರ ವಯಸ್ಕನ ಅಮೆರಿಕಾ ಯಾತ್ರೆ', ಬಿ.ಜಿ.ಎಲ್. ಸ್ವಾಮಿಯವರ 'ಅಮೆರಿಕಾದಲ್ಲಿ ನಾನು' ಗೊರೂರರ 'ಅಮೆರಿಕಾದಲ್ಲಿ ಗೊರೂರು', ಜಿ.ಎಸ್. ಶಿವರುದ್ರಪ್ಪನವರ 'ಗಂಗೆಯ ಶಿಖರಗಳಲ್ಲಿ', ದ್ವಾರಕಾನಾಥರ 'ಅಮೆರಿಕಾ ಆ ಮುಖ' ಕೃತಿಗಳನ್ನು ಸೃಜನೇತರವೆಂದೆನ್ನಲಾಗುವುದಿಲ್ಲ.

ಪ್ರವಾಸ ಕಥನವನ್ನು ಕುರಿತು ಖ್ಯಾತ ಬರಹಗಾರರು ಈ ರೀತಿ ಹೇಳಿದ್ದಾರೆ. ವಿ.ಸೀ. 'ವರ್ಣನೆಯೊಂದಿಗೆ ನಮ್ಮ ಭಾವನೆಯನ್ನು ಬೆರೆಸಿ, ಮನಸ್ಸನ್ನು ಅದರೊಳಗೆ ಹೋಗಿಸಿ ಸ್ವಚ್ಛಂದವಾಗಿ ಬರೆದಿರುವವರು ಕನ್ನಡದಲ್ಲಿ ಕಮ್ಮಿ" [1] ಎಂದಿದ್ದಾರೆ. ಕುವೆಂಪು "ಕಾದಂಬರಿಯ ಸ್ವಾರಸ್ಯವೂ, ಭಾವ ಪ್ರಬಂಧದ ಆತ್ಮೀಯತೆಯೂ ಹೊಸೆದುಕೊಂಡು ಪ್ರವಾಸ ಕಥನ ಪ್ರವಹಿಸುತ್ತಿತ್ತು" [2] ಎಂದು ಹೇಳಿದ್ದಾರೆ. ಎ.ಎನ್. ಮೂರ್ತಿರಾಯರು "ಇದು ದಿನಚರಿಯೂ ಅಲ್ಲ, ಸಾಮಾನ್ಯ ಕಥನವೂ ಅಲ್ಲ; ಅವೆರಡರ ಬೆರಕೆ. ಆ ಬಗೆಯ ತಲೆ ಚೀಟಿ ಹಚ್ಚದೆ ಅನುಭವ ನಿರೂಪಣೆ ಎಂದು ಕರೆದು ಸುಮ್ಮನಾಗುತ್ತೇನೆ. [3] ಎಂದಿದ್ದಾರೆ. ಕಾರಂತರು "ನಮ್ಮ ದೇಶದಲ್ಲಿ ಕಾಣಲಾರದ ಯಾವುದೋ ಒಂದು ಬಗೆಯ ಚೆಲುವು ಅಲ್ಲಿ ಕಾಣ ಸಿಕ್ಕೀತು ಎಂಬ ಆಸೆ ಉಂಟಾಗಿತ್ತು" [4] ಎನ್ನುತ್ತಾರೆ. ಆದ್ದರಿಂದಲೇ ಶಕ್ತ ಲೇಖಕನ ಕೈಯಲ್ಲಿ ಪ್ರವಾಸ ಸಾಹಿತ್ಯವು ಬರಿ ದಿನಚರಿಯಾಗದೆ, ಅನುಭವದ ನೆನಪಿನ ಸುರುಳಿಯೊಂದಿಗೆ ರಮ್ಯತೆಯನ್ನು ಭಾವವನ್ನು ಬೆರೆಸಿದ ಅದ್ಭುತ ಸಾಹಿತ್ಯ ಪ್ರಕಾರವಾಗಿದೆ. ಇದು ಹೊಸಗನ್ನಡ ಕಾಲಘಟ್ಟದಲ್ಲಿ ಪ್ರಚುರತೆಗೆ ಒಂದು ಹೊಸ ಪ್ರಕಾರ. "ಕನ್ನಡದಲ್ಲಿಯ ಪ್ರವಾಸ ಸಾಹಿತ್ಯ ಕನ್ನಡ ಸಾಹಿತ್ಯಕ್ಕೇನೇ ಸಂಪತ್ತು ಇದ್ದಂತೆ. ಈ ಸಾಹಿತ್ಯವು ಬೆಳೆದಂತೆ, ನಮ್ಮಲ್ಲಿ ಹೊಸ ಚೇತನ, ಹೊಸ ದೃಷ್ಟಿ ಇವೂ ಸಹ ಉದಯವಾದಾವು" ಎಂದು ವರದರಾಜ ಹುಯಿಲಗೋಳರು ಹೇಳಿದ್ದಾರೆ. ಕನ್ನಡದಲ್ಲಿ ಸಾಕಷ್ಟು ಪ್ರವಾಸ ಕಥನಗಳು ಬಂದಿವೆ ಯಾದರೂ ಶುಷ್ಕತೆಯನ್ನು ಮೀರಿ ನಿಂತವು ಬೆರಳೆಣಿಕೆಯಷ್ಟು. ಸಿ.ವೀರಣ್ಣ "ಪ್ರವಾಸ ಸಾಹಿತ್ಯ ಶ್ರೀಮಂತವಾಗಬೇಕಾದರೆ, ಬರೆಯುವವನ ವ್ಯಕ್ತಿತ್ವದ ಪ್ರಖರತೆ, ತಾನು ನೋಡಿದ ಜನಾಂಗದ ಬಗ್ಗೆ ಆಳವಾದ ತಿಳುವಳಿಕೆ, ತಿಳಿಯಾದ ಮನಸ್ಸು ಅನುಭವಗಳನ್ನು ಕಲಾತ್ಮಕ ಗೊಳಿಸುವ ಜಾಣ್ಮೆಗಳಿಲ್ಲದೆ ಸಾಧ್ಯವಾಗಲಾರದು" ಎಂದಿದ್ದಾರೆ. ಇಂತ ಪ್ರವಾಸ ಕಥನದ ಸಾಂಸ್ಕೃತಿಕ ಅಧ್ಯಯನ ಈ ಸಂಪ್ರಬಂಧದ ಚಿತ್ತಿಯಾಗಿದೆ.

---

1. ವಿ.ಸೀ ; ಪಂಪಾಯಾತ್ರೆ- 1990

2. ಪ್ರಭುಶಂಕರ : ಅಮೆರಿಕಾದಲ್ಲಿ ನಾನು ಶಾಂತಿ (ಮುನ್ನುಡಿಯಲ್ಲಿ) 3. ಎ.ಎನ್. ಮೂರ್ತಿರಾವ್ ಅಪರವಯಸ್ಕನ ಅಮೆರಿಕಾ ಯಾತ್ರೆ 1979 4. ಶಿವರಾಮ ಕಾರಂತ್; ಅಪೂರ್ವ ಪಶ್ಚಿಮದಲ್ಲಿ - 1977

## 2-ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರವಾಸವೆಂಬುದು ಅತ್ಯಂತ ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವ ಕ್ರಿಯೆ. ಪ್ರವಾಸದ ಪ್ರಕ್ರಿಯೆಯನ್ನು ಮನುಷ್ಯನಷ್ಟೇ ಅಲ್ಲದೆ ಪ್ರಾಣಿ ಪಕ್ಷಿಗಳಲ್ಲಿಯೂ ಕಾಣಬಹುದಾಗಿದೆ. ಪಕ್ಷಿಗಳು ತಮ್ಮ ಸಂತಾನಾಭಿವೃದ್ಧಿಗಾಗಿ ಸಾವಿರಾರೂ ಮೈಲಿಗಳ ಹಾರಾಟ ನಡೆಸಿ ವಲಸೆ ಹೋಗಿ ಸಂತಾನಾಭಿವೃದ್ಧಿಯನ್ನು ನಡೆಸುತ್ತದೆ. ಆದಿಮಾನವನು ಆಹಾರಕ್ಕಾಗಿ ತನ್ನ ನೆಲೆಗಳನ್ನು ಬದಲಿಸುತ್ತಿದ್ದನು. ಹರಪ್ಪ ಮತ್ತು ಮೊಹೆಂಜೋದಾರೋದ ನೆಲೆಗಳಲ್ಲಿರುವ ಮಹಾಸ್ನಾನಗೃಹಗಳು ಇತರ ನೆಲೆಗಳು ಜನರಿಗೆ ಮನೋರಂಜನೆಯ ಕೇಂದ್ರಗಳಾಗಿದ್ದವು. ವೇದಗಳ ಕಾಲದಲ್ಲಿ ಜನರು ಮನೋರಂಜನೆಗಾಗಿ ತಮ್ಮ ನೆಲೆಯಿಂದ ದೂರ ಹೋಗಿ ಬದುಕುವುದನ್ನು ಕಾಣುತ್ತೇವೆ. 'ವನವಾಸ' ಎಂಬ ಕಲ್ಪನೆಯ ಒಂದು ಭಾಗ ಪ್ರಕೃತಿಯ ಹಸಿರು ಕೇಂದ್ರಗಳಲ್ಲಿ ಹೋಗಿ ಬದುಕುವುದು, ನಿತ್ಯ ಬದುಕಿನ ಬವಣೆಯನ್ನು ತೊರೆದು ತತ್ಕಾಲಕ್ಕೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವುದು ಎಂಬುವೇ ಆಗಿತ್ತು.

ಕ್ರಿ.ಪೂ. 4000 ದ ಕಾಲಕ್ಕೆ ಬೆಬಿಲೋನಿಯನ್ನರು ಸಂಚಾರ ಕಾರ್ಯಕ್ರಮಗಳನ್ನು ರೂಪಿಸಿದ ಕುರಿತು ನಮಗೆ ವಿವರ ದೊರೆಯುತ್ತದೆ. ಸುಮೇರಿಯನ್ ಜನಾಂಗದ ಕಾಲದಲ್ಲಿ ದುಡ್ಡಿನ ಬಳಕೆ ಮತ್ತು ಆ ದುಡ್ಡಿನಿಂದ ವಸ್ತು ಖರೀದಿಗಾಗಿ ಸಂಚಾರಗಳು ನಡೆದ ಕುರಿತು ನಮಗೆ ಮಾಹಿತಿ ದೊರೆಯುತ್ತದೆ. ಪರ್ಷಿಯನ್ ಜನರು ಕೂಡಾ ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಸಂಚಾರ ಹೋಗುವ ಪ್ರವೃತ್ತಿ ಬೆಳೆಸಿಕೊಂಡಿದ್ದರು.

ಗ್ರೀಕ್ ಸಂಸ್ಕೃತಿ ಬೆಳೆದು ಬಂದ ಹಾಗೆ ಸಂಚಾರವು ನಿರ್ದಿಷ್ಟ ಮನೋರಂಜನೆಯ ಭಾಗವಾಗಿ ಬೆಳವಣಿಗೆ ಹೊಂದಿತು. ಇತಿಹಾಸದ ಪಿತಾಮಹ ಎಂದು ಹೆಸರಾದ ಹೆರೋಡಸ್, ಪ್ಲೇಟೋ, ಅರಿಸ್ಟಾಟಲ್, ಪೈಥಾಗೋರಸ್ ಮುಂತಾದ ಗ್ರೀಕ್ ಸಿದ್ಧಾಂತಿಗಳು ಪ್ರಯಾಣಕೈಗೊಂಡ ಕುರಿತು ವಿಸ್ತೃತ ವಿವರಗಳಿವೆ. ಮೋಜಿಗಾಗಿ ಪ್ರವಾಸ ಮಾಡುತ್ತಿದ್ದುದ್ದರ ಬಗ್ಗೆ ಹೋಮರನ 'ಒಡಿಸ್ಸಿ'ಯಿಂದ ತಿಳಿದು ಬರುತ್ತದೆ. ಒಲಂಪಿಕ್ಸ್ ಕ್ರೀಡೆಗಳು ಗ್ರೀಕರ ಸಂಚಾರಕ್ಕೆ ಪೂರಕವಾದ ಅವಕಾಶಗಳಾಗಿದ್ದವು. ಹಾಗಾಗಿ ಪ್ರವಾಸವೆಂಬುದು ನಿನ್ನೆ ಮೊನ್ನೆಯದಲ್ಲ.

ಮೊದ ಮೊದಲು ನಮ್ಮಲ್ಲಿ ಪ್ರವಾಸವೆಂದರೆ 'ಯಾತ್ರೆ' ಎಂಬ ಸೀಮಿತವಾದ ಅರ್ಥವನ್ನೇ ಒಳಗೊಂಡಿತು. ತೀರ್ಥಕ್ಷೇತ್ರಗಳಿಗೆ ಭೇಟಿ ನೀಡಿ ದೇವರ ದರ್ಶನವನ್ನು ಮಾಡಿ ಪುಣ್ಯ ಸಂಪಾದಿಸುವುದರ ಮೂಲಕ ತಮ್ಮ ಜನ್ಮವನ್ನು ಸಾರ್ಥಕ ಗೊಳಿಸಿಕೊಳ್ಳುತ್ತಿದ್ದರು. ಹರಪ್ಪಯುಗದಲ್ಲಿ ಸ್ನಾನಗೃಹಗಳಲ್ಲಿ ಸ್ನಾನ ಪಡೆಯುವುದು ಎಂಬುದು ಕಾಲ ಕ್ರಮೇಣ ಪವಿತ್ರ ಸ್ಥಳಗಳಲ್ಲಿ ಸ್ನಾನ ಪಡೆಯುವ ರೂಪವನ್ನು ಪಡೆದು ತೀರ್ಥಸ್ನಾನ ಸ್ಥಳಗಳ ನಿರ್ಮಾಣವಾಯಿತು. ಬೌದ್ಧಧರ್ಮ, ಜೈನಧರ್ಮ ಪ್ರಚಾರಕ್ಕೆ ಬಂದ ಮೇಲೆ ಬುದ್ಧ, ಮಹಾವೀರರ ಜೀವನಕ್ಕೆ ಸಂಬಂಧಪಟ್ಟ ಸ್ಥಳಗಳು ಪವಿತ್ರವೆಂಬ ಕಲ್ಪನೆ ಮೂಡಿ ಲುಂಬಿಣಿ, ಸಾರನಾಥ, ಕೌಶಾಂಬಿ ಮುಂತಾದವು ಪವಿತ್ರ ಸ್ಥಳಗಳಾಗಿ ರೂಪು ಗೊಂಡವು.

ಈ ಕಲ್ಪನೆಯು ಹಿಂದೂ ಧರ್ಮದಲ್ಲಿಯೂ ಪ್ರಚುರತೆಗೆ ಬಂದು ರಾಜರುಗಳು ಹೊರಗಣರಾಜ್ಯದ ಜನರನ್ನು ಆಕರ್ಷಿಸಲು ಧರ್ಮ ಸಂಬಂಧಿ ನಿರ್ಮಾಣಗಳಲ್ಲಿ ತೊಡಗಿದರು. 'ತಂತ್ರ ಚೂಡಾಮಣಿಯು' ಜನರು ಧಾರ್ಮಿಕ ಉದ್ದೇಶಗಳಿಗಾಗಿ ಭೇಟಿ ನೀಡುವ ಸ್ಥಳಗಳ ಪಟ್ಟಿ ನೀಡಿದರೆ 'ದೇವಿ ಭಾಗವತದಲ್ಲಿ' ವಿವಿಧ ಧರ್ಮಗಳ ಜನರು ಭೇಟಿ ನೀಡುವ 108 ಸ್ಥಳಗಳ ವಿವರಣೆ ನೀಡಲಾಗಿದೆ. ಅಂದಿನಿಂದ ಇಂದಿನವರೆಗೂ ಭಾರತದಲ್ಲಿ ಧಾರ್ಮಿಕ ಪ್ರವಾಸ ಜೀವನದ ಅವಿಭಾಜ್ಯ ಅಂಗವಾಗಿದೆ.

ಹೀಗೆ ಧಾರ್ಮಿಕ ಉದ್ದೇಶಗಳಿಗೆ, ವ್ಯಾಪಾರ, ವಿದ್ಯಾಭ್ಯಾಸಕ್ಕಾಗಿ ದೇಶದಲ್ಲಿಯೇ ಪ್ರವಾಸ ಕೈಗೊಳ್ಳುತ್ತಿದ್ದರಾದರೂ ದೇಶದ ಎಲ್ಲೆಯನ್ನು ಮೀರುವ ಸಮುದ್ರವನ್ನು ದಾಟಿ ಪ್ರವಾಸ ಕೈಗೊಳ್ಳುವ ಸಾಹಸವನ್ನು ಯಾರೂ ಮಾಡುತ್ತಿರಲಿಲ್ಲ. ಏಕೆಂದರೆ ಅದು ಧರ್ಮ ಬಾಹಿರವಾದ ಚಟುವಟಿಕೆ ಯಾಗಿತ್ತು. ಹಾಗೊಂದು ವೇಳೆ ವಿದೇಶಿ ಪ್ರವಾಸವನ್ನು ಕೈಗೊಂಡಿದ್ದೇ ಆದರೆ ಅವರಿಗೆ ಬಹಿಷ್ಕಾರದ ದಂಡವನ್ನು ವಿಧಿಸುತ್ತಿದ್ದರು. ಇಲ್ಲವೇ ಸಮುದ್ರ ದಾಟಿದ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ಅವರನ್ನು ಶುದ್ಧೀಕರಿಸಲು ಪೂಜೆ ಪುನಸ್ಕಾರ ಮಂತ್ರ ತಂತ್ರಗಳಿಗೆಲ್ಲ ಒಡ್ಡುತ್ತಿದ್ದರು.

ಸುಮಾರು 60-70ರ ದಶಕದಲ್ಲಿ ಬೌದ್ಧಿಕ ವಿಕಾಸ ಹೊಂದಿದ ನಮ್ಮ ಜನರಲ್ಲಿ ಸ್ವಲ್ಪಮಟ್ಟಿನ ಬದಲಾವಣೆಯ ಗಾಳಿ ಬೀಸಿತು. ನಿಧಾನಗತಿಯಲ್ಲಿ ನಾನಾ ಉದ್ದೇಶಗಳಿಗಾಗಿ ವಿದೇಶ ಪ್ರವಾಸ ಮಾಡಲು ಆರಂಭಿಸಿ ವಿಶಾಲ ಮನೋಧರ್ಮವನ್ನು ಬೆಳೆಸಿಕೊಂಡರು. ೯೦ರ ದಶಕದಲ್ಲಿಯಂತೂ ವಿದೇಶ ಪ್ರವಾಸಕ್ಕಾಗಿ ಆಯಾ ದೇಶಗಳ ರಾಯಭಾರಿ ಕಚೇರಿಗಳ ಮುಂದೆ ಅನುಮತಿ ಪತ್ರ (ವೀಸಾ)ಕ್ಕಾಗಿ ಸರತಿ ಸಾಲಿನಲ್ಲಿ ನಿಲ್ಲುವವರ ಸಂಖ್ಯೆ ಹೆಚ್ಚಾಗತೊಡಗಿತು. ಇನ್ನು ಇತ್ತೀಚಿನ ದಿನಗಳಲ್ಲಿ ವಿದೇಶಕ್ಕೆ ತೆರಳುವವರ ಸಂಖ್ಯೆ ಹೆಚ್ಚಾಗಿದೆ. ತಮ್ಮ ಮಕ್ಕಳು ವಿದೇಶದಲ್ಲಿದ್ದಾರೆ. ಅಲ್ಲಿ ಡಾಲರ್‌ಗಳ ಸಂಬಳ ಪಡೆಯುತ್ತಿದ್ದಾರೆ, ಅಲ್ಲಿನ ನಾಗರೀಕರಾಗಿ ಹಸಿರುಕಾರ್ಡು ಪಡೆದಿದ್ದಾರೆ ಎಂದು ಹೇಳಿಕೊಳ್ಳುವುದು ಪ್ರತಿಷ್ಠೆಯ ವಿಷಯವೇ ಆಗಿದೆ.

ಜಾಗತೀಕರಣದ ಈ ಕಾಲದಲ್ಲಿ ಅಂಗೈಯಲ್ಲಿಯೇ ವಿಶ್ವವೆಂಬ ಭಾವ ಮೂಡಿದೆ. ಇದರ ಫಲವಾಗಿ ಅಮೆರಿಕ, ಲಂಡನ್ ಆಸ್ಟ್ರೇಲಿಯಾ ಎಂಬುದು ತಮ್ಮ ಪಕ್ಕದ ಊರೆಂಬ ಭಾವನೆ ಜನರಲ್ಲಿ ಮೊಳೆತಿದೆ. ಹೀಗಾಗಿ ವಿದೇಶಗಳಿಗೆ ಹೋಗುವವರ ಸಂಖ್ಯೆ ದಿನದಿನೇ ಹೆಚ್ಚುತ್ತಲಿದೆ. ನಮ್ಮ ದೇಶವನ್ನು ಸಂಪೂರ್ಣವಾಗಿ ತಿಳಿಯಲು ಬೇರೆ ರಾಜ್ಯದ ಜನ, ಭಾಷೆ, ಸಂಸ್ಕೃತಿ, ಸಾಹಿತ್ಯಕಲೆ, ಊರು ಕೇರಿಗಳ ಪರಿಚಯ ಮಾಡಿಕೊಂಡು ತಮ್ಮ ಅನುಭವಗಳನ್ನು ಪ್ರವಾಸ ಸಾಹಿತ್ಯದಲ್ಲಿ ದಾಖಲಿಸುವ ಸಲುವಾಗಿ ಡಾ. ಹಾ.ಮಾ. ನಾಯಕರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ 'ಪ್ರವಾಸ ಅನುದಾನ ಯೋಜನೆ'ಯನ್ನು ಆರಂಭಿಸಿ ಪ್ರತಿ ವರ್ಷ ಐದು ಜನ ಲೇಖಕರನ್ನು ಆಯ್ಕೆ ಮಾಡಿ ಅವರು ಬಯಸುವ ಭಾರತದ ಒಂದು ರಾಜ್ಯಕ್ಕೆ

ಕಳುಹಿಸಿಕೊಡುತ್ತಿದ್ದರು. ಅದೇ ರೀತಿ ಇಂದು ಸರ್ಕಾರ, ಸಂಘ ಸಂಸ್ಥೆಗಳು ಸಂಘಟನೆಗಳು ಅನೇಕವಿಷಯಗಳ ಅಧ್ಯಯನಕ್ಕಾಗಿ ಸಮಿತಿಗಳನ್ನು ರಚಿಸಿ ವಿದೇಶ ಪ್ರವಾಸಕ್ಕೆ ಕಳುಹಿಸುತ್ತಿದೆ. ವಿದೇಶ ಪ್ರವಾಸ ಮಾಡುವವರ ಸಂಖ್ಯೆ ಹೆಚ್ಚಾದಂತೆಲ್ಲ ಪ್ರವಾಸ ಸಾಹಿತ್ಯಗಳು ಹೆಚ್ಚಾಗುತ್ತಿವೆ. ಇಂತ ಪ್ರವಾಸ ಸಾಹಿತ್ಯ 19ನೇ ಶತಮಾನದ ನಂತರ ಸಾಹಿತ್ಯ ಜಗತ್ತಿಗೆ ಕಾಲೂರಿ ಒಂದು ಹೊಸ ಪ್ರಕಾರವಾಗಿಯೇ ಬೆಳೆದು ಬಂದಿದೆ. ಪ್ರವಾಸ ಸಾಹಿತ್ಯದ ಪರಿಚಯ ಮಾಡಿಕೊಳ್ಳುವ ನಮಗೆ ಮೊದಲಿಗೆ ದೊರೆಯುವ ಪ್ರವಾಸ ಸಾಹಿತ್ಯವೆಂದರೆ ಕರ್ಕಿ ವೆಂಕಟರವಣ ಶಾಸ್ತ್ರಿಯವರ 'ದಕ್ಷಿಣ ಭಾರತಯಾತ್ರೆ' ಇದನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಪ್ರವಾಸ ಸಾಹಿತ್ಯಕ್ಕೆ ನೂರ ಹದಿನೈದು ವಸಂತಗಳು ಸಂದಿವೆ. ಇದು ಸಂತಸದ ಸಂಗತಿಯೇ. ಕನ್ನಡದಲ್ಲಿ ಹೀಗಾಗಲೇ ಸುಮಾರು ಮುನ್ನೂರೈವತ್ತಕ್ಕೂ ಹೆಚ್ಚು ಪ್ರವಾಸ ಕಥನಗಳು ಹೊರಬಂದಿವೆ. ನಮ್ಮ ಪ್ರವಾಸಿ ಸಾಹಿತಿಗಳು ದೇಶ ವಿದೇಶಗಳ ವೈವಿಧ್ಯತೆಯನ್ನೆಲ್ಲಾ ತಮ್ಮ ಕೃತಿಗಳಲ್ಲಿ ಸೆರೆಹಿಡಿಯುವ ಪ್ರಯತ್ನ ಮಾಡಿದ್ದಾರೆ. ಇವುಗಳ ಅಧ್ಯಯನದಿಂದ ದೇಶದ ಮತ್ತು ಅನ್ಯ ದೇಶಗಳ ಇತಿಹಾಸ, ಭೌಗೋಳಿಕ ಹಿನ್ನೆಲೆ, ಸಂಸ್ಕೃತಿ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ವಿಚಾರಗಳ ಅರಿವು ಮೂಡುತ್ತವೆ. "ಪ್ರವಾಸ ಸಾಹಿತ್ಯ, ಸಾಹಿತ್ಯದ ಒಂದು ಅಂಗವಾಗಿ ರಸಾನುಭವವನ್ನು ಕೊಡುವುದಕ್ಕೆ ಸೀಮಿತವಾಗದೆ, ಲೇಖಕರು ಪ್ರವಾಸ ಮಾಡಿದ ನಾಡಿನ ಜನಾಂಗ, ಸಂಸ್ಕೃತಿ ಭೌತಿಕಾಭಿವೃದ್ಧಿಗಳ ಮಾಹಿತಿಗಳನ್ನು ಒದಗಿಸುತ್ತವೆ. ಪ್ರವಾಸಾನುಭವ ವ್ಯಕ್ತಿಯ ಆಲೋಚನೆಯ ಬೆಳವಣಿಗೆಯನ್ನೂ ಸೂಚಿಸುತ್ತದೆ. ಅಂದರೆ ಒಂದು ವಿಧದಲ್ಲಿ ಲೇಖಕನ ಆತ್ಮ ಚರಿತ್ರೆಯೂ ಆಗುತ್ತವೆ. ಇಂತಹ ಪ್ರವಾಸ ಸಾಹಿತ್ಯದ ಮೌಲ್ಯ ಹೆಚ್ಚುವುದು, ಲೇಖಕರ ಸಂವೇದನಾ ಶೀಲತೆ, ಪ್ರವಾಸ ಮಾಡಿದ ನಾಡಿನಲ್ಲಿದ್ದ ಅವಧಿ ಅಲ್ಲಿನ ಜನತೆಯೊಂದಿಗೆ ಬೆರೆಯಲೂ ಬೇಕಾದ ಭಾಷೆಯ ಅನುಕೂಲ ಇವುಗಳನ್ನು ಅವಲಂಬಿಸಿರುತ್ತೆ" ಎಂದು ವೀರಣ್ಣ ಅವರು ಹೇಳಿದ್ದಾರೆ. [1] ಕನ್ನಡದಲ್ಲಿ ವಿದೇಶ ವಿಷಯಕ್ಕೆ ಸಂಬಂಧಪಟ್ಟ ಮೊದಲ ಪ್ರವಾಸ ಪುಸ್ತಕ ಸಿಗುವುದು ಜಿ. ಪುಟ್ಟಯ್ಯನವರ 'ಅಭಿವೃದ್ಧಿ ಸಂದೇಶ' ಇಲ್ಲಿಯವರೆಗೂ ಸುಮಾರು ಇನ್ನೂರಕ್ಕೂ ಹೆಚ್ಚು ವಿದೇಶ ಪ್ರವಾಸ ಸಾಹಿತ್ಯ ಕೃತಿಗಳು ದೊರೆಯುತ್ತಿವೆ. ಇವುಗಳಲ್ಲಿ ಸಿಂಹಪಾಲು ಅಮೆರಿಕಾ ಕುರಿತ ಪ್ರವಾಸದ ಬಗ್ಗೆ ತಮಗೆ ಆದ ಅನುಭವವನ್ನು ತಮ್ಮ ಕಥನದಲ್ಲಿ ದಾಖಲಿಸಿದ್ದಾರೆ. ಈ ದಾಖಲೆಗಳೆಲ್ಲವೂ ಆದೇಶದ ವೈಭವ, ಆರ್ಥಿಕ ಮುನ್ನಡೆ, ಭವ್ಯ ಕಟ್ಟಡ, ರಸ್ತೆ, ವ್ಯವಸ್ಥೆ , ಜೀವನಶೈಲಿ, ಸಂಸ್ಕೃತಿ ಹಾಗೂ ಪ್ರಕೃತಿಗಳ ವರ್ಣನೆಗಳೇ ಆಗಿವೆ. ಇಲ್ಲವೇ ಆ ದೇಶದ ಸಂಸ್ಕೃತಿಗಿಂತ ನಮ್ಮ ದೇಶದ ಸಂಸ್ಕೃತಿ, ಕುಟುಂಬ ಮೌಲ್ಯ, ಧರ್ಮವೇ ಹೆಚ್ಚು ಎಂಬ ನಿಲುವನ್ನೂ ಪ್ರತಿಪಾದಿಸುತ್ತವೆ. ಆದರೆ ದ್ವಾರಕಾನಾಥರ 'ಅಮೆರಿಕಾ ಆ ಮುಖ' ಪ್ರವಾಸ ಕಥನವು ಉಳಿದ ಪ್ರವಾಸ ಕಥನಗಳಿಗಿಂತ ಭಿನ್ನವಾಗಿದ್ದು, ಅಮೆರಿಕಾದ ಮತ್ತೊಂದು ಮುಖವನ್ನು ನಮ್ಮ ಮುಂದೆ ಅನಾವರಣಗೊಳಿಸಿದೆ. ನಮ್ಮ ದೇಶದಲ್ಲಿರುವ

---

1. ಸಾಹಿತ್ಯ ವಾರ್ಷಿಕ 1971-ಬೆಂ ವಿವಿ.

ಜಾತಿಸಂಘರ್ಷ, ಸಮಾಜದಲ್ಲಿನ ಅಸಮಾನತೆ ಅಲ್ಲಿ ವರ್ಣ ಮತ್ತು ಜನಾಂಗದ ಹೆಸರಿನಲ್ಲಿರುವುದನ್ನು ಗುರುತಿಸಿದ್ದಾರಷ್ಟೇ ಅಲ್ಲದೆ, ಆ ದೇಶದಲ್ಲಿ ನಮ್ಮ ದೇಶವನ್ನು ಕಾಣುತ್ತಾ ಹೋಗುತ್ತಾರೆ.

ಅದೇ ರೀತಿ ಇವರ 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಪ್ರವಾಸ ಕಥನವು ಬೇರೆಲ್ಲಾ ಆಫ್ರಿಕಾ ಪ್ರವಾಸ ಕಥನಗಳಿಗಿಂತ ಭಿನ್ನವಾಗಿದೆ. ಬೇರೆಲ್ಲಾ ಪ್ರವಾಸ ಕಥನಗಳು ಆಫ್ರಿಕಾದ ಬಡತನ, ಪ್ರಾಕೃತಿಕ ಸೌಂದರ್ಯ ಅಲ್ಲಿನ ಜನಾಂಗದ ವಿವರಣೆಯನ್ನು ನೀಡಿದರೆ, ಇವರ ಕೃತಿಯು ಅವುಗಳಿಗಿಂತ ಭಿನ್ನವಾಗಿದೆ. 'ಅಮರೇಶ ನುಗುಡೋಣಿ' "ಯಾವುದೇ ಪ್ರವಾಸ ಕಥನದ ಹಿಂದೆ ಒಂದು ಉದ್ದೇಶವಿರುತ್ತದೆಯಾದರೂ ಅದರ ನಿರೂಪಕನ ಮನೋಧರ್ಮವೇ ಆ ಕಥನದ ಒಂದು ಸ್ವರೂಪವನ್ನು ನಿರ್ಧರಿಸುತ್ತದೆ. ಒಂದು ನಾಡನ್ನು ಹತ್ತಾರು ಮಂದಿ ಸುತ್ತಾಡಿದರೂ ಅವರೆಲ್ಲ ಕಂಡ ಅನುಭವಗಳಿಗೆ ರೂಪ ಕೊಡುವಾಗ ಹಲವು ನಿಲುವುಗಳು ವ್ಯಕ್ತವಾಗುವುದು ಸಹಜವೇ. ಆದರೂ ಪ್ರವಾಸ ಕಥನಕ್ಕೆ ಅನನ್ಯತೆ ಬರುವುದು ಆಯಾ ನಿರೂಪಕನ ಮನೋಭಾವ ಮತ್ತು ಶಕ್ತ ಬರವಣಿಗೆಯಿಂದ ಮಾತ್ರ ಸಾಧ್ಯ" ಎಂದಿದ್ದಾರೆ. [2] ಹೀಗಾಗಿ ಈ ಪ್ರವಾಸ ಕಥನಗಳು ಬರೀ ನೋಡಿದ ಸ್ಥಳಗಳ ಹಾಗೂ ಅನುಭವದ ವಿವರಣೆ ಮಾತ್ರವಾಗದೆ ಒಂದು ತಾತ್ವಿಕ ಚೌಕಟ್ಟನ್ನು ಹಾಕಿಕೊಂಡ ಪ್ರವಾಸ ಕಥನವಾಗಿ ಬೇರೆಲ್ಲ ಪ್ರವಾಸ ಕಥನಗಳಿಗಿಂತ ಭಿನ್ನವಾಗಿದೆ ಎಂಬುದನ್ನು ಗುರುತಿಸುವ, ಆ ಭಿನ್ನತೆಯ ವಿಶೇಷವನ್ನು ವಿಶ್ಲೇಷಿಸುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

ಇಲ್ಲಿ ಮುಖ್ಯವಾಗಿ ಸಿ.ಎಸ್. ದ್ವಾರಕಾನಾಥರ ಎರಡು ಪ್ರವಾಸ ಕಥನಗಳಾದ ಗಾಂಧಿ ಮೆಟ್ಟಿದ ನಾಡಿನಲ್ಲಿ ಹಾಗೂ ಅಮೆರಿಕಾ ಆ ಮುಖಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅದರ ಜೊತೆಗೆ ಟಿ.ಕೆ. ರಾಮರಾವ್‌ರವರ ಗೋಳದ ಮೇಲೊಂದು ಸುತ್ತು, ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರ ಅಮೆರಿಕಾದಲ್ಲಿ ಗೊರೂರು ಕೃತಿಗಳನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

---

2. ಅಮರೇಶ ನುಗುಡೋಣಿ ; ಕನ್ನಡ ವಾರ್ಷಿಕ 1994 : ಕನ್ನಡ ವಿಶ್ವವಿದ್ಯಾಲಯ

## 3. ಡಾ. ಸಿ.ಎಸ್. ದ್ವಾರಕಾನಾಥರವರ ಬದುಕು ಮತ್ತು ಬರಹ

ಕೋಲಾರದ ಕಪ್ಪು ಮಣ್ಣಿನಿಂದ ಬಂದ ಡಾ. ಸಿ.ಎಸ್. ದ್ವಾರಕಾನಾಥ್ ಜನಿಸಿದ್ದು 1954, ಮಾರ್ಚ್ 10ರಂದು ರೈತ ಕುಟುಂಬ ಒಂದರಲ್ಲಿ. ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ ನಂತರ ಕೋಲಾರ ಸರ್ಕಾರಿ ಕಾಲೇಜಿನಲ್ಲಿ ಬಿ.ಎಸ್ಸಿ. ಪದವಿಯನ್ನು ಬೆಂಗಳೂರಿನ ಜಯದೇವ ಕಾನೂನು ಕಾಲೇಜಿನಲ್ಲಿ ಕಾನೂನು ಪದವಿಯನ್ನು, ಮೈಸೂರು ವಿಶ್ವವಿದ್ಯಾಲಯದಲ್ಲಿ ಪತ್ರಿಕೋದ್ಯಮ ಸರ್ಟಿಫಿಕೇಟ್ ಕೋರ್ಸ್‌ಅನ್ನು ಮುಗಿಸಿ ಹಂಪಿ ಕನ್ನಡ ವಿಶ್ವಿದ್ಯಾಲಯದಿಂದ 'ಕೈವಾರ ನಾರಾಯಣಪ್ಪ' ಒಂದು ಅಧ್ಯಯನ ಎಂಬ ಪ್ರೌಢ ಪ್ರಬಂಧಕ್ಕೆ ಡಿ. ಲಿಟ್. (ಡಾಕ್ಟರ್‌ಆಫ್ ಲಿಟರೇಚರ್) ಪದವಿಯನ್ನು ಪಡೆದರು. ಇವರು ವೃತ್ತಿಯಲ್ಲಿ ವಕೀಲರು, ಪ್ರವೃತ್ತಿಯಲ್ಲಿ ಪತ್ರಕರ್ತರಾಗಿದ್ದು 'ಲಂಕೇಶ್ ಪತ್ರಿಕೆ' ಯಲ್ಲಿ ಎರಡು ದಶಕಗಳ ಕಾಲ ವಿಶೇಷ ವರದಿಗಾರರಾಗಿ ಸೇವೆ ಸಲ್ಲಿಸಿದರು. ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಇವರ ಲೇಖನಗಳು, ವಿಚಾರ ಪ್ರಕಟಗೊಂಡಿವೆ. ಈಗ 'ಅಗ್ನಿ' ಪತ್ರಿಕೆಯಲ್ಲಿ ವಿಶೇಷ ಬರಹಗಾರರಾಗಿದ್ದಾರೆ.

ಇವರು ಕರ್ನಾಟಕ ರಾಜ್ಯ ಹಿಂದುಳಿದ ಆಯೋಗದ ಅಧ್ಯಕ್ಷರಾಗಿ ಸರ್ಕಾರದಿಂದ ನೇಮಿಸಲ್ಪಟ್ಟು ಕಾರ್ಯ ನಿರ್ವಹಿಸಿದವರು. ದಲಿತ ಸಂಘರ್ಷ ಸಮಿತಿ, ಬಂಡಾಯ ಸಾಹಿತ್ಯ ಚಳುವಳಿ, ಕನ್ನಡ ಚಳುವಳಿ, ವಿಚಾರವಾದಿ ಚಳುವಳಿ ಮತ್ತು ಇತರ ಜನಪರ ಸಂಘಟನೆಗಳೊಂದಿಗೆ ಸಕ್ರಿಯವಾಗಿ ಗುರುತಿಸಿಕೊಂಡು ಜನ ಕೇಂದ್ರಿತ ಹೋರಾಟಗಳಲ್ಲಿ ಭಾಗವಹಿಸಿದ್ದಾರೆ.

ಕನ್ನಡ ಸಾಹಿತ್ಯ ಅಕಾಡೆಮಿಗಾಗಿ 'ವೇಮನ' ಪುಸ್ತಕ ರಚನೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿದ 'ಲೋಹಿಯಾ' ಮಾಲಿಕೆಯಲ್ಲಿ ಇವರ ಅನುವಾದಗಳು ಪ್ರಕಟವಾಗಿವೆ. ಮಣ್ಣಬಳೆನಾದ, ಅಮೆರಿಕಾ ಆ ಮುಖ ಇವರ ಪ್ರಕಟಿತ ಕೃತಿಗಳು 'ಗಾಂಧಿಮೆಟ್ಟಿದ ನಾಡಿನಲ್ಲಿ' ಆಫ್ರಿಕಾ ಪ್ರವಾಸ ಕಥನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಮಾನವ ಹಕ್ಕುಗಳ ಬಗ್ಗೆ, ನಾಡಿನ ರಾಜಕಾರಣ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಮಸ್ಯೆಗಳ ಬಗ್ಗೆ ಸಹಸ್ರಾರು ಲೇಖನಗಳು ವರದಿಗಳು ಪ್ರಕಟವಾಗಿವೆ. ವಿಶೇಷವಾಗಿ ಮಾನವ ಹಕ್ಕುಗಳ ನ್ಯಾಯವಾದಿಯಾಗಿ ಕಾರ್ಯನಿರ್ವಹಿಸುತ್ತಿರುವ ದ್ವಾರಕಾನಾಥರು ದಕ್ಷಿಣ ಆಫ್ರಿಕಾ, ಅಮೆರಿಕಾ ಥಾಯಲೆಂಡ್, ಬಾಂಗ್ಲಾದೇಶ್, ಈಜಿಪ್ಟ್, ನೇಪಾಳ ದೇಶಗಳಲ್ಲಿ ನಡೆದ ಕಾರ್ಯಾಗಾರ ಮತ್ತು ಉಪನ್ಯಾಸ ಮಾಲಿಕೆಗಳಲ್ಲಿ ಭಾಗವಹಿಸಿದ್ದಾರೆ. ಹಿಂದುಳಿದ ಆಯೋಗದ ಅಧ್ಯಕ್ಷರಾಗಿದ್ದಾಗ ಕಣ್ಣಿಗೆ ಕಾಣದಂಥ ಬುಡಕಟ್ಟು ಜನಾಂಗ, ಅಲೆಮಾರಿ, ಲೈಂಗಿಕ ಅಲ್ಪಸಂಖ್ಯಾತರು, ಎಚ್.ಐ.ವಿ. ಪೀಡಿತ ಮಕ್ಕಳಿಗೆ ಸಂಬಂಧಿಸಿದಂತೆ ಆರು ನೂರು ಪುಟಗಳ ವರದಿಯೊಂದನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸಿದ್ದಾರೆ. ಇವರು 'ಅಹಿಂದ' ಚಳುವಳಿಯ ಕರ್ತೃವೂ ಹೌದು.

## 4. ಪ್ರವಾಸ ಕಥನ ಪರಂಪರೆಯ ಕಿರುಪರಿಚಯ

ಏಕತಾನತೆಯಿಂದ ನರಳುತ್ತಿರುವ ಮನಸ್ಸಿಗೆ ಮನೋಲ್ಲಾಸವನ್ನುಂಟು ಮಾಡುವುದೇ ಪ್ರವಾಸ. ಹೊಸ ದೇಶ, ಪ್ರಕೃತಿ, ಜನ, ಭಾಷೆ, ವೇಷಭೂಷಣ ಸಂಸ್ಕೃತಿಗಳನ್ನು ಪರಿಚಯಿಸಿಕೊಳ್ಳುತ್ತಾ ಹೊಸ ಅನುಭವಕ್ಕೆ ನಮ್ಮನ್ನು ನಾವು ತೆರೆದುಕೊಳ್ಳುವುದು ಪ್ರವಾಸವಾದರೆ, ಈ ಎಲ್ಲದರಿಂದುಂಟಾದ ಅನುಭವಗಳನ್ನು ಬರಣಿಗೆಯ ಮೂಲಕ ಎಲ್ಲರೊಡನೆ ಹಂಚಿಕೊಳ್ಳುವುದು ಪ್ರವಾಸ ಕಥನವಾಗುತ್ತದೆ. ಪ್ರೊ.ಎಂ. ಎಚ್. ಕೃಷ್ಣಯ್ಯ "ಇರುವ ನೆಲೆಯಿಂದ ಚಲಿಸುವುದೇ ಪ್ರವಾಸ. ಆಗ ಕಂಡುಂದನ್ನು ವೈಯಕ್ತಿಕ ಅನಿಸಿಕೆಗಳೊಡನೆ ದಾಖಲಿಸುವುದೇ ಪ್ರವಾಸ ಸಾಹಿತ್ಯ" ಎಂದಿದ್ದಾರೆ.[1]

ಪ್ರಾಚೀನ ಕಾಲದಲ್ಲಿ ನಮ್ಮ ದೇಶದಲ್ಲಿ ಪ್ರವಾಸವೆಂದರೆ ತೀರ್ಥಯಾತ್ರೆಯೇ ಆಗಿರುತ್ತಿತ್ತು. ಕಾಶೀ, ರಾಮೇಶ್ವರ ಹರಿದ್ವಾರ, ತಿರುಪತಿ, ಧರ್ಮಸ್ಥಳ ಮುಂತಾದ ಧಾರ್ಮಿಕ ಕ್ಷೇತ್ರಗಳಿಗೆ ಭೇಟಿಯನ್ನು ನೀಡುತ್ತಿದ್ದರು. ಇದರ ಉದ್ದೇಶ ಪುಣ್ಯ ಸಂಪಾದನೆಯೇ ಆಗಿರುತ್ತಿತ್ತು. ದೇವರ ದರ್ಶನದ ಜೊತೆಗೆ ದೇಶ ದರ್ಶನದ ಸುಯೋಗವು ಕೂಡಿ ಬರುತ್ತಿತ್ತಾದರೂ ತಮಗಾದ ಅನುಭವಗಳಿಗೆ ಉಚಿತ ರೂಪ ನೀಡುತ್ತಿರಲಿಲ್ಲ, ನೀಡಿದರೂ ಅದು ಅವರ ಮಹಾಕಾವ್ಯದ ಯಾವುದೋ ಒಂದು ಸಂದರ್ಭದಲ್ಲಿ ಪ್ರಕಟ ಗೊಳ್ಳುತ್ತಿತ್ತು. ಅಷ್ಟೇ ಅಲ್ಲದೆ ನಮ್ಮ ದೇಶೀಯರ ಪ್ರವಾಸ ನಮ್ಮ ನೆಲದಲ್ಲಿಯೇ ನಡೆಯುತ್ತಿತ್ತು. ಆ ಕಾಲದ ಧರ್ಮಗಳು ಸಮುದ್ರ ದಾಟುವುದನ್ನು , ಸೀಮೋಲ್ಲಂಘನೆಯನ್ನು ಒಪ್ಪುತ್ತಿರಲಿಲ್ಲ. ಸಮುದ್ರ ದಾಟಿದರೆ ಅವರಿಗೆ ಪುರಸ್ಕಾರದ ಬದಲು ಬಹಿಷ್ಕಾರದ ದಂಡ ವಿಧಿಸಲಾಗುತ್ತಿತ್ತು. ಹಾಗಾಗಿ ದೇಶವನ್ನು ದಾಟುವ ಪ್ರಯತ್ನ ನಮ್ಮಲ್ಲಿರಲೇ ಇಲ್ಲ. ಇದಕ್ಕೆ ವ್ಯತಿರಿಕ್ತವಾಗಿ ವಿದೇಶಿಯರು ಭಾರತಕ್ಕೆ ಬಂದು ಇಲ್ಲಿನ ಮೂಲೆ ಮೂಲೆಗಳನ್ನು ಸುತ್ತಿ ತಮ್ಮ ದೇಶಕ್ಕೆ ಹಿಂತಿರುಗಿ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ. ಭಾರತದ ಇತಿಹಾಸ ತಿಳಿಯಲು ಈ ದಾಖಲೆಗಳಿಂದ ಅನುಕೂಲವಾಗಿದೆ. ಇಂತ ಪ್ರವಾಸ ಕಥನವನ್ನು ಎಚ್.ಎಲ್. ನಾಗೇಗೌಡರು 'ಪ್ರವಾಸಿ ಕಂಡ ಇಂಡಿಯಾ' ದ ಆರು ಸಂಪುಟಗಳಲ್ಲಿ ಕನ್ನಡಕ್ಕೆ ತಂದಿದ್ದಾರೆ.

ವಿಶ್ವದ ಹಲವಾರು ಪ್ರಮುಖ ಪ್ರವಾಸ ಕಥನಗಳಲ್ಲಿ ಹೆರೋಡಟಸನ ಪ್ರವಾಸ ಕಥನವೇ ಮೊದಲನೆಯದು. ಆತನು ಪರ್ಷಿಯನ್ ಯುದ್ಧಗಳ ಕುರಿತು ವಿವರಣಾತ್ಮಕವಾದ ಪ್ರವಾಸಿಯ ಮಾಹಿತಿಯನ್ನು ಒದಗಿಸುತ್ತಾನೆ.  ಒಂದನೇ ಶತಮಾನದ ಗ್ರೀಸಿನ ಸ್ಟ್ರಾಬೊ, ಪಸಾನಿಯಾಸ್, ಧಾರ್ಮಿಕ ಪ್ರವಾಸ ಕೈಗೊಂಡ ಚೀನಾದೇಶದ ಪ್ರವಾಸಿಗಳು, ಹದಿಮೂರನೇ ಶತಮಾನದ ಮಾರ್ಕೋಪೋಲೋ, ಹದಿನಾರು ಹದಿನೇಳನೇ ಶತಮಾನದ ಐರೋಪ್ಯ ಪ್ರವಾಸಿಗಳು, ಹದಿನೆಂಟನೇ ಶತಮಾನದ ಕ್ಯಾಸನೋವಾ, ಜರ್ಮನಿಯ ಗಯಟೆ, ಕೀಸರ್‌ಲಿಂಗ್ ಇವರೆಲ್ಲ

---

1. ಪ್ರೊ. ಎಂ. ಎಚ್. ಕೃಷ್ಣಯ್ಯ : ಕನ್ನಡ ಸಾಹಿತ್ಯ ಸಮೀಕ್ಷೆ 1992 ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

ಉತ್ತಮ ಪ್ರವಾಸ ಕಥನ ಬರೆದಿದ್ದಾರೆ. ಹ್ಯೂಯೆನ್ ತ್ಸಾಂಗ್, ಅಲ್ಬುರನಿ, ನಿಕೋಲೋ ಡಿ ಕೋಂಟ್ ಮುಂತಾದ ವಿದೇಶಿಯರು ನಮ್ಮ ದೇಶಕ್ಕೆ ಬಂದು ಇಲ್ಲಿಯ ವೈಭವವನ್ನು, ಸಂಸ್ಕೃತಿಯನ್ನು, ಸಮಾಜ ವ್ಯವಸ್ಥೆಯನ್ನು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ.

ಪ್ರಾಚೀನ ಭಾರತೀಯ ಸಾಹಿತ್ಯದಲ್ಲೂ ಪ್ರವಾಸಿ ಸಾಹಿತ್ಯವೆಂದು ಗುರುತಿಸಬಹುದಾದ ಕೆಲವು ಗ್ರಂಥಗಳಿವೆ ಎಂದು ಜಿ.ಎಸ್. ವಡಗಾಂವಿಯವರು ಗುರುತಿಸುತ್ತಾ, 'ಕಲ್ಹಣ, ರಜೋನ ರಾಜ, ಶ್ರೀವರ, ಪ್ರಾಜ್ಯಭಟ್ಟ, ಶುಕ, ಸೋಮೇಶ್ವರ, ಅರಿಸಿಂಹ ಮುಂತಾದವರು ಅಂದಿನ ಐತಿಹಾಸಿಕ, ರಾಜಕೀಯ, ಭೌಗೋಳಿಕ ಸ್ಥಿತಿಯನ್ನು ನಿರೂಪಿಸುವ ಗ್ರಂಥಗಳನ್ನು ರಚಿಸಿದ್ದಾರೆ' ಎಂದಿದ್ದಾರೆ. [2] ಪ್ರೊ ಎಂ.ಎಚ್. ಕೃಷ್ಣಯ್ಯನವರು "ಕಾಳಿದಾಸನ ಮೇಘ ಸಂದೇಶ ಕಾಲ್ಪನಿಕ ವಾದರೂ ಪ್ರವಾಸ ಕಥನವೇ ಆಗಿದೆ" ಎಂದಿದ್ದಾರೆ.[3]

'ನಮ್ಮ ಹಿಂದಿನ ಕವಿಗಳೆಲ್ಲ ಮಹಾಪಂಡಿತರೇ ಆಗಿದ್ದು, ಅವರ ಅಂದಿನ ಕೆಲವು ಕೃತಿಗಳಲ್ಲಿ ಪ್ರವಾಸದ ಅನುಭವಗಳ ದಾಖಲೆಗಳು ದೊರೆಯುತ್ತದೆಂದು, ಉದಾಹರಣೆಗೆ ಬಾಣನ ಸಂಸ್ಕೃತದ 'ಹರ್ಷಚರಿತ' ಇದರಲ್ಲಿ ಬಾಣಭಟ್ಟನು ಪ್ರವಾಸದ ಲಾಭಗಳನ್ನು ತಿಳಿಸಿದ್ದಾನೆ'[4] ಎಂದಿದ್ದಾರೆ ಡಾ. ಲತಾ ಗುತ್ತಿ, ಕನ್ನಡದ ಆದಿಕವಿ ಪಂಪ, ತನಗೆ ಆಶ್ರಯ ನೀಡಿದ ದೊರೆ ಅರಿಕೇಸರಿಯ ಜೊತೆಗೆ ಅನೇಕ ಕಡೆಗೆ ದಂಡಯಾತ್ರೆಗೆ ಹೋಗುತ್ತಿದ್ದ. ಅದು ಅಲ್ಲಲ್ಲಿ ಯುದ್ಧಯಾತ್ರೆ, ತೀರ್ಥಯಾತ್ರೆಯೇ ಆಗಿರಬಹುದು. ಹೀಗೆಲ್ಲ ಸುತ್ತಾಡಿದಾಗ ಆದ ಕೆಲವು ಅನುಭವಗಳನ್ನು ಕಾವ್ಯಗಳಲ್ಲಿ ದಾಖಲಿಸಿದ್ದಾನೆ. ಉದಾಹರಣೆಗೆ ಪಂಪಭಾರತದಲ್ಲಿ ಬಂದಿರುವ ಬನವಾಸಿಯ ವರ್ಣನೆ ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಮೊತ್ತಮೊದಲ ದಾಖಲೆ ಎನಿಸುತ್ತವೆ. ಪಂಪ ಬನವಾಸಿ ಯವನಲ್ಲ, ಅವನು ಉತ್ತರ ಕರ್ನಾಟಕದಲ್ಲಿ ಹುಟ್ಟಿದವನು, ಆಂಧ್ರಪ್ರದೇಶದಲ್ಲಿ ಇದ್ದವನು ಆದರೆ ಅವನು ಯಾವಾಗಲೋ ಒಮ್ಮೆ ಬನವಾಸಿ ಪ್ರಾಂತ್ಯಕ್ಕೆ ಹೋಗಿ ಅಲ್ಲಿಯ ಸೌಂದರ್ಯಕ್ಕೆ ಮನಸೋತು ಆ ಪದ್ಯಗಳನ್ನು ಬರೆದಿದ್ದಾನೆ. ಆಗ ವ್ಯಕ್ತಿ ನಿಷ್ಠವಾದಂಥ ಭಾವಗೀತ ಪ್ರಕಾರ ಇರಲಿಲ್ಲ. ತನ್ನ ಅನುಭವಗಳೇನಿದ್ದರೂ ಅವುಗಳನ್ನು ವಸ್ತು ನಿಷ್ಠವಾದ ಮಹಾಕಾವ್ಯದಲ್ಲಿ ಮಾತ್ರ ಪ್ರಕಟ ಮಾಡುವುದು ಅವನಿಗೆ ಸಾಧ್ಯವಾಗಿತ್ತು. ಆದ್ದರಿಂದ ಪಂಪ ಆ ಪದ್ಯಗಳನ್ನು ತನ್ನ ಭಾರತದಲ್ಲಿ ಸೇರಿಸಿದ್ದಾನೆ ಎನ್ನುತ್ತಾರೆ [5] ಸಿ.ಪಿ.ಕೆ.ಯವರು ಆದರೆ ಪ್ರವಾಸ ವಿವರಣೆ ಅಂದು ಒಂದು ಪ್ರಕಾರವಾಗಿ ದಾಖಲಾಗದಿದ್ದ ಕಾರಣ ಅದನ್ನು ಪ್ರವಾಸ ಸಾಹಿತ್ಯದ ಗುಂಪಿಗೆ ಸೇರಿಸಲಾಗುವುದಿಲ್ಲ. ಹೀಗಾಗಿ

---

2. ಶ್ರೀ.ಜಿ.ಎಸ್. ವಡಗಾಂವಿ; ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಕರ್ನಾಟಕ ವಿಶ್ವ ವಿದ್ಯಾಲಯ 1976

3. ಪ್ರೊ. ಎಂ. ಎಚ್. ಕೃಷ್ಣಯ್ಯ ; ಕನ್ನಡ ಸಾಹಿತ್ಯ ಸಮೀಕ್ಷೆ 1992; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು : ಪುಟ 85

4. ಡಾ. ಲತಾ ಗುತ್ತಿ; ಪ್ರವಾಸ ಸಾಹಿತ್ಯ; ವಿಶ್ವ ಸಂಸ್ಕೃತಿಗಳು; ಸಚಿನ್ ಪಬ್ಲಿಷರ್ಸ್, ಬೆಂಗಳೂರು ಪುಟ -14

5. ಸಿಪಿಕೆ ಮಲ್ಲೇಪುರಂ ವೆಂಕಟೇಶ್; ಪ್ರವಾಸ ಸಾಹಿತ್ಯ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ, 119.

ಪ್ರವಾಸ ಸಾಹಿತ್ಯವೆಂಬ ಪ್ರಕಾರವನ್ನು ಕಾಣಲು ಆಧುನಿಕ ಯುಗಕ್ಕೆ ಬರಬೇಕಾಗಿದೆ.

ಕನ್ನಡ ಸಾಹಿತ್ಯದ ಮೇಲೆ ಪಾಶ್ಚಿಮಾತ್ಯ ಸಾಹಿತ್ಯದ ಪ್ರೇರಣೆ, ಪ್ರಭಾವ ನಿಚ್ಚಳವಾಗಿದೆ. ಹತ್ತೊಂಬತ್ತನೇ ಶತಮಾನದ ಕೈಗಾರಿಕಾ ಕ್ರಾಂತಿಯಿಂದಾಗಿ ಪಾಶ್ಚಿಮಾತ್ಯ ಸಮಾಜದಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಗಳಾಗತೊಡಗಿದವು. ದುಡಿಯುವ ವರ್ಗಗಳಿಗೆ ಅನೇಕ ಅನುಕೂಲತೆಗಳನ್ನು ಮಾಡಿಕೊಡಲಾಯಿತು. ಅವರ ದಿನನಿತ್ಯದ ಜಂಜಾಟಗಳಿಂದ ಸ್ವಲ್ಪಮಟ್ಟಿನ ನೆಮ್ಮದಿ ಪಡೆದುಕೊಳ್ಳುವ ಸಲುವಾಗಿ ವಾರ್ಷಿಕ ರಜೆಯನ್ನು ಕಾರ್ಖಾನೆಗಳು ನೀಡತೊಡಗಿದವು. ಅವರ ವಿಶ್ರಾಂತಿಗಳಿಗೆಂದು ಅಲ್ಲಿನ ಸರ್ಕಾರ, ಸಂಸ್ಥೆಗಳು ಅನೇಕ ವಿಶ್ರಾಂತಿ ಧಾಮಗಳನ್ನು ಮನೋರಂಜನಾ ಸೌಲಭ್ಯಗಳನ್ನು ಒದಗಿಸಿಕೊಡತೊಡಗಿತು. ಇಂತಹ ನೆಮ್ಮದಿಯ ತಾಣಗಳಿಗೆ ಜಗತ್ತಿನಾದ್ಯಂತ ಜನರು ಪ್ರವಾಸ ಮಾಡತೊಡಗಿದರು ಹಾಗೂ ತಮ್ಮ ಅನುಭವಗಳನ್ನು ಬರೆದಿಡತೊಡಗಿದರು.

ಇನ್ನು ನಮ್ಮ ದೇಶದಲ್ಲಿ ವಿದೇಶಿಯರು ನೆಲೆಯೂರಿ, ಶಿಕ್ಷಣ ವ್ಯವಸ್ಥೆಯನ್ನು ಬದಲಾಯಿಸಿದಂತ ಸಂದರ್ಭದಲ್ಲಿ ಅನೇಕ ಜನ ಭಾರತೀಯರು ಉನ್ನತ ವ್ಯಾಸಂಗಕ್ಕಾಗಿ, ವ್ಯಾಪಾರ ವಹಿವಾಟಿಗಾಗಿ ವಿದೇಶಗಳಿಗೆ ತೆರಳಲೂ ಆರಂಭಿಸಿದರು. ಕಾಲಾನಂತರ ಉನ್ನತ ಶಿಕ್ಷಣಕ್ಕಾಗಿ ವೃತ್ತಿಯನ್ನು ಅರಸಿ ಅಲ್ಲಿಯೇ ನೆಲೆಯೂರುವವರ ಸಂಖ್ಯೆ ದಿನೇ ದಿನೆ ಹೆಚ್ಚುತ್ತಾ ಹೋಯಿತು. ಹೀಗೆ ನೆಲೆಯೂರಿದವರು ಶಿಕ್ಷಣಕ್ಕಾಗಿ ಹೋದವರು, ವಿದೇಶದಲ್ಲಿಯೇ ನೆಲೆಸಿರುವ ತಮ್ಮ ಮಕ್ಕಳನ್ನು ಕಂಡು ಬರಲು ಹೋದಂತವರು, ಸಭೆ ಸಮ್ಮೇಳನಗಳಿಗೆ ಹೋದಂತವರು ತಮ್ಮ ಅನುಭವಗಳಿಗೆ ಸಾಹಿತ್ಯರೂಪವನ್ನು ನೀಡುತ್ತಾ ಹೋದರು. ಇದು ಸಾಹಿತ್ಯದ ಹೊಸ ಪ್ರಕಾರವಾದ ಪ್ರವಾಸ ಕಥನವಾಗಿ ಹೊರಹೊಮ್ಮಿತು.

ಕೆ. ಮರುಳಸಿದ್ದಪ್ಪ "ಪ್ರವಾಸಿಗಳಲ್ಲಿ ಎರಡು ಬಗೆಯಿರುತ್ತದೆ. ಹವ್ಯಾಸಿ ಪ್ರವಾಸಿಗಳು ಮತ್ತು ನಿಯೋಗ ಪ್ರವಾಸಿಗಳು ಎಂದು ಅವರನ್ನು ವಿಂಗಡಿಸಬಹುದಾಗಿದೆ. ಎರಡನೆ ಬಗೆಯ ಪ್ರವಾಸಿಗಳು ಸರ್ಕಾರದ ಪ್ರತಿನಿಧಿಗಳಾಗಿಯೋ ಅಥವಾ ಆಮಂತ್ರಿತ ಅತಿಥಿಗಳಾಗಿಯೋ ದೇಶವಿದೇಶಗಳಿಗೆ ಹೋಗುತ್ತಾರೆ. ಅವರನ್ನು ಸರ್ಕಾರಿ ಪ್ರವಾಸಿಗಳೆಂದೂ ಕರೆಯಬಹುದು. ಎರಡೂ ಬಗೆಯ ಪ್ರವಾಸಿಗರು ಒಂಟಿಯಾಗಿಯೂ ಇರುತ್ತಾರೆ, ಗುಂಪಾಗಿಯೂ ಇರುತ್ತಾರೆ. ಆದರೆ ಯಾವುದೇ ಗುಂಪಿನಲ್ಲಿರದೆ ಅಥವಾ ಯಾರ ಪ್ರತಿನಿಧಿಯೂ ಆಗಿರದೆ ಒಂಟಿಯಾಗಿ ಅಥವಾ ಒಬ್ಬಿಬ್ಬ ಸ್ನೇಹಿತರೊಡನೆ ಸ್ವಂತ ಖರ್ಚಿನಲ್ಲಿ ಸಮಯದ ಮಿತಿಯಿಲ್ಲದೆ ಪ್ರವಾಸ ಮಾಡುವ ವ್ಯಕ್ತಿಗೆ ಇರುವ ಸೌಲಭ್ಯಗಳು ಉಳಿದವರಿಗೆ ಇರುವುದಿಲ್ಲ. ಗುಂಪಿನಲ್ಲಿ ಹೋಗುವವರು ತಂಡದ ನಾಯಕನ ಅಥವಾ ಒಟ್ಟು ಗುಂಪಿನ ನಿರ್ದೇಶನದಲ್ಲಿದ್ದರೆ ಸರ್ಕಾರಿ ಪ್ರವಾಸಿಗಳಂತೂ ನೇರವಾಗಿ ಅತಿಥೇಯರ ದಾಕ್ಷಿಣ್ಯದ ಸುವರ್ಣ ಪಂಜರದಲ್ಲಿರುತ್ತಾರೆ. ಇನ್ನು ಶುದ್ಧ ಪ್ರವಾಸವೇ ಮುಖ್ಯವಾಗಿರದೆ

ಯಾವುದೋ ಸಭೆ, ವಿಚಾರಗೋಷ್ಠಿ, ರಾಜಕೀಯ ಅಥವಾ ಸಾಂಸ್ಕೃತಿಕ ರಾಯಭಾರಗಳಾಗಿ ವಿದೇಶಗಳಿಗೆ ಹೋದವರಿಗಂತೂ ತಾವು ಭೇಟಿ ಮಾಡಿದ ದೇಶವನ್ನು ಸಮಗ್ರವಾಗಿ ನೋಡಲು ಸಾಕಷ್ಟು ಸಮಯವಿರುವುದಿಲ್ಲ. ಆಶ್ಚರ್ಯಕರ ಸಂಗತಿಯೆಂದರೆ ಕನ್ನಡದಲ್ಲಿ ಇಂಥ ಪ್ರವಾಸಿಗಳೇ ಕೆಲವು ಉತ್ತಮ ಪ್ರವಾಸ ಕಥನವನ್ನು ಬರೆದಿದ್ದಾರೆ" [6] ಎಂದಿದ್ದಾರೆ.

ಹತ್ತೊಂಬತ್ತನೇ ಶತಮಾನದ ತರುವಾಯ ಕನ್ನಡದಲ್ಲಿ ಪ್ರವಾಸ ಕಥನವು ಹುಲುಸಾಗಿ ಬೆಳೆಯಲು ಪ್ರಾರಂಭಿಸಿತು. ಎಸ್. ವಿದ್ಯಾಶಂಕರ "ಕನ್ನಡ ಪ್ರವಾಸ ಸಾಹಿತ್ಯಕ್ಕೆ, ಒಂದು ಸಾಹಿತ್ಯ ಪ್ರಕಾರವಾಗಿ ನಿಶ್ಚಿತ ನೆಲೆಯಿರುವುದು ಅದರ ಒಂದು ನೂರು ವರ್ಷಗಳ ಗತ ಇತಿಹಾಸದಿಂದ ಸ್ಪಷ್ಟಗೊಳ್ಳುತ್ತಿದೆ" ಎಂದಿದ್ದಾರೆ. [7]

ಕನ್ನಡದಲ್ಲಿ ಮೊದಲಿಗೆ ಬಂದ ಪ್ರವಾಸ ಸಾಹಿತ್ಯಗಳಲ್ಲಿ ಹೆಚ್ಚಿನವು ತೀರ್ಥಕ್ಷೇತ್ರಗಳನ್ನು ಪರಿಚಯಿಸುವುದೇ ಆಗಿದೆ. ಆ ಕ್ಷೇತ್ರ ಅಲ್ಲಿನ ದೇವರ ಮಹಿಮೆಯನ್ನು ತಿಳಿಸುವುದೇ ಇದರ ಮುಖ್ಯ ಉದ್ದೇಶ ವಾಗಿತ್ತು. ಕನ್ನಡದಲ್ಲಿ ಮೊದಲ ಪ್ರವಾಸ ಕಥನ ರಚನೆಯಾದುದು ಯಾವಾಗ? ಮೊದಲ ಪ್ರವಾಸ ಕಥನ ಯಾವುದು? ಎಂಬುದು ಕುತೂಹಲದ ಹಾಗೂ ಚರ್ಚೆಯ ಸಂಗತಿ. ಕೆಲವರು 1860ರ ಸುಮಾರಿಗೆ ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿ ಬರೆದ 'ದಕ್ಷಿಣಯಾತ್ರಾ ಚರಿತ್ರೆ' ಮೊದಲ ಕನ್ನಡ ಪ್ರವಾಸ ಕಥನವೆಂದು ಭಾವಿಸಿದ್ದರೆ, ಇನ್ನು ಕೆಲವರು ವಿ.ಸೀಯವರ 'ಪಂಪಾ ಯಾತ್ರೆ'ಯೆಂದೂ, ಬಿ. ಪುಟ್ಟಯ್ಯನವರ 'ಅಭಿವೃದ್ಧಿ ಸಂದೇಶ' ವೆಂದೂ ಭಾವಿಸಿದ್ದಾರೆ. "ಈಗ ಸುಲಭವಾಗಿ ನೋಡಲೂ ದೊರೆಯದ 'ದಕ್ಷಿಣಯಾತ್ರಾ ಚರಿತ್ರೆ' 1890 ರಲ್ಲಿ ರಚಿತವಾಗಿದೆ. 'ಅಭಿವೃದ್ಧಿ ಸಂದೇಶ' 1921ರಲ್ಲೂ, 'ಪಂಪಾಯಾತ್ರೆ' 1926ರಲ್ಲೂ ಮೊದಲ ಬಾರಿಗೆ ಪ್ರಕಟಗೊಂಡವು. ಇವುಗಳಲ್ಲಿ ಕರ್ಕಿ ವೆಂಕಟರಮಣ ಶಾಸ್ತ್ರಿಗಳ ಪ್ರಸಕ್ತ ಕಾಲದ ದೃಷ್ಟಿಯಿಂದ ಪ್ರಾಚೀನವಾದುದು ಎಂಬುದರಲ್ಲಿ ಸಂದೇಹವಿಲ್ಲವೆಂದು [8] ಡಾ. ಎನ್.ಎಸ್. ತಾರಾನಾಥರವರು ಹೇಳಿದ್ದಾರೆ. ಶ್ರೀನಿವಾಸ ಹಾವನೂರ್ "ಭಾರತೀ ಪ್ರೆಸ್ ಸ್ಥಾಪಿಸಿ ಆ ಮೂಲಕ ಪ್ರಕಟನಾ ಕಾರ್ಯದಲ್ಲಿ ತೊಡಗಿದನು. ಮೊತ್ತಮೊದಲ ಕೃತಿ 'ದಕ್ಷಿಣಯಾತ್ರಾ ಚರಿತ್ರೆ' ಎಂಬುದು ಉಡುಪಿಯಿಂದ ಗುರುವಾಯೂರು ಗಳವರೆಗಿನ ಕ್ಷೇತ್ರಗಳನ್ನು ಒಂದೋ ಎರಡೋ ಪದ್ಯಗಳಲ್ಲಿ ವರ್ಣಿಸಲಾಗಿದೆ. 37 ಪದ್ಯಗಳ ಅಂಗೈಯಗಲದ ಪುಸ್ತಕವಿದು" ಎಂದು ದಕ್ಷಿಣಯಾತ್ರಾ ಚರಿತ್ರೆಯ ಬಗ್ಗೆ ಹೇಳಿದ್ದಾರೆ. [9] ಹಾಗಾಗಿ ಇದು ಕ್ಷೇತ್ರ ಗವಿತೆಯ ಹೊತ್ತಿಗೆ ಯಾಗುತ್ತವೆಯೇ ವಿನಾ ಪ್ರವಾಸ ಕಥನವಾಗುವುದಿಲ್ಲ. ಬಿ. ಪುಟ್ಟಯ್ಯನವರು 1912 ರಿಂದ 1915ರವರೆಗೆ ಮುದ್ರಣ ಕಲೆಯ ವಿಶೇಷ ತರಬೇತಿಗಾಗಿ ಲಂಡನ್ನಿಗೆ

---

6. ಕೆ. ಮರುಳಸಿದ್ಧಪ್ಪ; ಸಾಹಿತ್ಯ ವಾರ್ಷಿಕ 1974 ; ಬೆಂ.ವಿ.ವಿ. ಬೆಂಗಳೂರು

7. ಎಸ್. ವಿದ್ಯಾಶಂಕರ; ಕನ್ನಡ ಸಾಹಿತ್ಯ ಸಮೀಕ್ಷೆ 1961; ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

8. ಡಾ. ಎನ್.ಎಸ್. ತಾರಾನಾಥ; ಪ್ರವಾಸ ಸಾಹಿತ್ಯ; ಶಕ್ತಿ ಪ್ರಕಾಶನ, ಮೈಸೂರು ಪು-25

9. ಶ್ರೀನಿವಾಸ ಹಾವನೂರು ; ಹೊಸಗನ್ನಡದ ಅರುಣೋದಯ; ಮೈಸೂರು

ತೆರಳಿ ಅಲ್ಲಿ ತಮಗಾದ ಅನುಭವವನ್ನು ಒಕ್ಕಲಿಗರ ಪತ್ರಿಕೆಗೆ ಪತ್ರದ ಮೂಲಕ ತಿಳಿಸುತ್ತಿದ್ದರು. ಈ ಪತ್ರಗಳ ಸಂಕಲನ ರೂಪವೇ 'ಅಭಿವೃದ್ಧಿ ಸಂದೇಶ' ಡಾ. ಎಸ್.ಎಸ್. ತಾರಾನಾಥ "ಇದನ್ನು ಪತ್ರರೂಪದ ಪ್ರವಾಸಾನುಭವವೆಂದು ಸಡಿಲವಾಗಿ ಕರೆಯಬಹುದೇನೋ" [10] ಎಂದಿದ್ದಾರೆ.

1926ರಲ್ಲಿ ಪ್ರಕಟಗೊಂಡ ವಿ.ಸೀಯವರ 'ಪಂಪಾಯಾತ್ರೆ' ಪ್ರವಾಸ ಕಥನದ ಎಲ್ಲಾ ಲಕ್ಷಣಗಳನ್ನೊಳಗೊಂಡ ಮೊದಲ ಪ್ರವಾಸ ಕಥನವೆಂದೇಳಬಹುದು. ವಿ.ಸೀ. ಮತ್ತು ಅವರ ಮಿತ್ರವೃಂದ ಸೇರಿ ಮಾಡಿದ ಪ್ರವಾಸವಿದು. ಗದ್ಯರೂಪದಲ್ಲಿರುವ ಇದು ಸರಸ ಸನ್ನಿವೇಶಗಳಿಂದಲೂ, ಲವಲವಿಕೆಯ ನಿರೂಪಣೆಯಿಂದಲೂ ಕೂಡಿರುವ ಪ್ರವಾಸ ಕಥನ, ತಾರಾನಾಥರು "ಪ್ರವಾಸ ಕಥನಕ್ಕಿರಬೇಕಾದ ಎಲ್ಲ ಮುಖ್ಯ ಲಕ್ಷಣಗಳನ್ನೂ ಇದು ಒಳಗೊಂಡಿದೆ. ದಿಟಕ್ಕೂ ತನ್ನ ನಿಜವಾದ ಅರ್ಥದಲ್ಲಿ 'ಪ್ರವಾಸ ಸಾಹಿತ್ಯ' ಕನ್ನಡದಲ್ಲಿ ಆರಂಭವಾದದ್ದು ಈ ಕೃತಿಯಿಂದ" [11] ಎಂದಿದ್ದಾರೆ. 1937-38ರಲ್ಲಿ ಅರಸು ಮನೆತನದ ರಾಜಕುಮಾರಿ ಚನ್ನಾಜಮ್ಮಣ್ಣಿ ಬರೆದ 'ನನ್ನ ಪ್ರಪಂಚ ಸಂಚಾರ' ಮಹಿಳೆಯೊಬ್ಬಳು ಬರೆದ ಮೊದಲ ಪ್ರವಾಸ ಕಥನ. "ಯಾರ ಕಣ್ಣಿಗೂ ಬೀಳದಿರುವ ಅಪರೂಪದ ಕೃತಿ. ಇವರ ಬರವಣಿಗೆಯಂತೂ ಸ್ಪುಟವಾಗಿವೆ. ಅನುಭವಗಳನ್ನು ನೇರವಾಗಿ ನಿರ್ಭೀಡತೆಯಿಂದ ಹೇಳುತ್ತಾ ಹೋಗುತ್ತಾರೆ. ಕೈಯಂತೂ ಪಳಗಿದೆ. ಸರಳತೆ ಖಚಿತತೆ, ರಮ್ಯ ನಿರೂಪಣೆ, ವಸ್ತು ನಿರ್ವಹಣೆಯಲ್ಲಿ ನಮ್ಮ ಆಸಕ್ತಿಯನ್ನು ಕೆರಳಿಸುತ್ತದೆ "[12] ಎನ್ನುತ್ತಾರೆ ಮಲ್ಲೇಪುರಂ ಜಿ. ವೆಂಕಟೇಶ್ 1926ರ ನಂತರ ಕನ್ನಡದಲ್ಲಿ ಪ್ರವಾಸ ಸಾಹಿತ್ಯವು ಹುಲುಸಾಗಿ ಬೆಳೆಯಿತು. ಸ್ವಾತಂತ್ರ್ಯಪೂರ್ವದಲ್ಲಿ ನಿಧಾನವಾಗಿ ಬೆಳೆದು ಬಂದ ಈ ಕ್ಷೇತ್ರ ಸ್ವಾತಂತ್ರ್ಯಾನಂತರ ಭರದಿಂದ ಬೆಳೆಯಿತು. ಪ್ರವಾಸ ಸಾಹಿತ್ಯ ಅತ್ಯಂತ ಸಂಕೀರ್ಣವಾದ ಸಾಹಿತ್ಯಪ್ರಕಾರ. ಇದು ಜಗತ್ತಿನ ಇತಿಹಾಸ, ಸಂಸ್ಕೃತಿ, ಕಲೆ, ಜಾನಪದ, ಭೂಗೋಳ, ತತ್ತ್ವಶಾಸ್ತ್ರ, ಐತಿಹ್ಯ, ಶಿಲ್ಪಕಲೆ, ಸಾಹಿತ್ಯ ಮುಂತಾದ ಹತ್ತು ಹಲವು ಕ್ಷೇತ್ರಗಳನ್ನು ತನ್ನ ಒಡಲಿನಲ್ಲಿ ತುಂಬಿಕೊಂಡಿರುತ್ತದೆ. ಇವೆಲ್ಲಕ್ಕೂ ಮಿಗಿಲಾಗಿ ಲೇಖಕನ ಚೈತನ್ಯಪೂರ್ಣವಾದ ನಿರೂಪಣೆ ಪ್ರವಾಸ ಕಥನಕ್ಕೆ ಕಳಸ ವಿಟ್ಟಂತಿರುತ್ತದೆ. ಇದು ಹಿತಮಿತವಾದ ಮಸಾಲ ಸಾಮಗ್ರಿಗಳಿಂದ ತಯಾರಿಸಿದ ಖಾದ್ಯದ ರೀತಿಯಲ್ಲಿ ಸ್ವಾದಿಷ್ಟವಾಗಿರುತ್ತದೆ. ಹೀಗಾಗಿ ಡಾ.ಕೆ. ಅನಂತರಾಮು "ಅದು ಕ್ಷೇತ್ರ ಸಾಹಿತ್ಯ, ಲಲಿತ ಪ್ರಬಂಧ, ಜೀವನ ಚರಿತ್ರೆ, ಆತ್ಮಕಥೆ, ವಿಚಾರ ಸಾಹಿತ್ಯ, ಪತ್ರ ಸಾಹಿತ್ಯ , ನಾಟಕ, ವಿಮರ್ಶೆ, ಸಣ್ಣಕಥೆಗಳ ಸ್ಪರ್ಶವನ್ನು ಪಡೆದುಗೊಳ್ಳುತ್ತವೆ. ರಂಗದ ಮೇಲೆ ನಡೆದಾಡುವ ಪಾತ್ರಗಳು ಕಾದಂಬರಿ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕ್ಷಣಕ್ಷಣಕ್ಕೂ ಹೊಸ ಹೊಸದನ್ನು ತೋರಿಸುವಂತೆ ಪ್ರವಾಸ ಕಥನಕಾರನೂ ನಿರೂಪಣೆಯುದ್ದಕ್ಕೂ ಹೊಸ ಹೊಸ

---

10. ಡಾ. ಎಸ್. ಎಸ್. ತಾರಾನಾಥ; ಪ್ರವಾಸ ಸಾಹಿತ್ಯ; ಶಕ್ತಿ ಪ್ರಕಾಶನ; ಮೈಸೂರು.

11. ಡಾ. ಎಸ್.ಎಸ್. ತಾರಾನಾಥ; ಪ್ರವಾಸ ಸಾಹಿತ್ಯ ; ಶಕ್ತಿ ಪ್ರಕಾಶನ : ಮೈಸೂರು ಪು 27

12. ಸಂ. ಮಲ್ಲೇಪುರಂ ಜಿ. ವೆಂಕಟೇಶ್; ಪ್ರವಾಸ ಸಾಹಿತ್ಯ ಒಂದು ಅಧ್ಯಯನ; ಹೊನ್ನ ಪ್ರಕಾಶನ ಬೆಂಗಳೂರು 1992- ಪು 10

ಸಂಗತಿಗಳ ರಸದೌತಣವನ್ನು ಮಾಡಿಸುತ್ತಾನೆ" [13] ಎಂದಿದ್ದಾರೆ. ಹಾಗಾಗಿಯೇ ರಾಜ್ಯ ಸಾಹಿತ್ಯ ಅಕಾಡೆಮಿಯು ಪ್ರತಿವರ್ಷ ಯಾವುದಾದರೊಂದು ಪ್ರವಾಸ ಕಥನವನ್ನು ಪುರಸ್ಕರಿಸುತ್ತಾ ಬಂದಿವೆ. ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ತಮ್ಮ 'ಅಮೆರಿಕಾದಲ್ಲಿ ಗೊರೂರು' ಪ್ರವಾಸ ಕಥನಕ್ಕಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನವನ್ನೇ ಪಡೆದಿದ್ದಾರೆ.

ಡಾ. ಲತಾಗುತ್ತಿಯವರು ಕನ್ನಡ ಪ್ರವಾಸ ಸಾಹಿತ್ಯ ಚರಿತ್ರೆಯನ್ನು ನಾಲ್ಕು ಹಂತಗಳಲ್ಲಿ ವಿಂಗಡಿಸಿದ್ದಾರೆ. 1860ರಿಂದ 1921ರವರೆಗೆ ಮೊದಲ ಹಂತವೆಂದೂ ಇಲ್ಲಿ ಜೆ. ಕೃಷ್ಣಮೂರ್ತಿ, ಕರವೀರಪ್ಪ, ಅಂದಾನಪ್ಪ, ಕುಲಕರ್ಣಿ, ಬಿ. ಪುಟ್ಟಯ್ಯ ಮುಂತಾದ ಲೇಖಕರನ್ನು ಗುರುತಿಸಿದ್ದಾರೆ. ಎರಡನೇ ಹಂತ 1926ರಿಂದ 1950ರವರೆಗೆ, ಇಲ್ಲಿ ವಿ.ಸೀ. ಶ್ರೀರಂಗ, ಸಿದ್ಧವನಹಳ್ಳಿ ಕೃಷ್ಣಶರ್ಮ, ವಿ.ಕೃ. ಗೋಕಾಕ್, ಚನ್ನಜಮ್ಮಣ್ಣಿ ಆರ್.ಎಸ್. ನಾರಾಯಣರಾವ್ ಮುಂತಾದ ಲೇಖಕರನ್ನು ಗುರುತಿಸಿದ್ದಾರೆ. 1950ರಿಂದ 75ರವರೆಗೆ ಶಿವರಾಮ ಕಾರಂತ, ಬಿ.ಜಿ.ಎಲ್. ಸ್ವಾಮಿ, ಕೃಷ್ಣಾನಂದ ಕಾಮತ್, ಹೋ ಶ್ರೀನಿವಾಸಯ್ಯ, ಕು.ಶಿ. ಹರಿದಾಸಭಟ್ಟ ಜಿ.ಎಸ್. ಶಿವರುದ್ರಪ್ಪ, ಬಸವರಾಜ ಕಟ್ಟೀಮನಿ, ದೇ ಜವರೇಗೌಡ, ಕೆ. ಅನಂತರಾಮು, ಚಂದ್ರಭಾಗಾದೇವಿ, ಹ. ವೆಂ. ನಾಗರಾಜ್, ಟಿ.ಕೆ. ರಾಮರಾವ್, ಕುದ್ಕಾಡಿ ವಿಶ್ವನಾಥ ರೈ ಇವರುಗಳು ಬರೆದಿರುವ ಪ್ರವಾಸ ಕಥನವನ್ನು ಮೂರನೇ ಹಂತವೆಂದೂ ಗುರುತಿಸಿದ್ದಾರೆ.

ಇನ್ನು ನಾಲ್ಕನೆಯ ಹಂತವನ್ನು 1975ರಿಂದ 2000 ವೆಂದು ಗುರುತಿಸಿ, ಆ ಕಾಲಘಟ್ಟದಲ್ಲಿ ಪ್ರವಾಸ ಸಾಹಿತ್ಯವನ್ನು ಬರೆದ ಎನ್. ಭದ್ರಯ್ಯ ಎನ್.ಡಿ. ಬಗರಿ, ಡಾ. ಪ್ರಭುಶಂಕರ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸ.ಸ. ಮಾಳವಾಡ, ಎ.ಎನ್. ಮೂರ್ತಿರಾವ್, ಶಾಂತಾದೇವಿ ಮಾಳವಾಡ ಅನುಪಮಾ ನಿರಂಜನ, ನೀಳಾದೇವಿ, ವಸಂತಕವಲಿ, ಜಿ. ಗೋಪಾಲ ರಾ.ಯ. ಧಾರವಾಡಕರ, ಎಚ್.ಕೆ. ರಂಗನಾಥ, ದಿನಕರದೇಸಾಯಿ, ದೊಡ್ಡೇರಿ ವೆಂಕಟಗಿರಿರಾವ್, ಸುಧಾಮೂರ್ತಿ, ಶ್ರೀರಂಜನ ಭಟ್ಟ, ಪುಂಡಿಕ್ಯಾ ಗಣಪಯ್ಯ ಭಟ್, ಡಾ. ಎಚ್.ಎಲ್. ನಾಗೇಗೌಡ, ವ್ಯಾಸರಾಯ ಬಲ್ಲಾಳ್, ಎಚ್.ಎಸ್. ರಾಘವೇಂದ್ರರಾವ್, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಲತಾಗುತ್ತಿ, ವಿಜಯಾಸುಬ್ಬರಾಜ್, ಎಸ್. ರಾಮಸ್ವಾಮಿ, ಜಿ.ಪಿ. ಬಸವರಾಜು, ನಾಗೇಶ ಹೆಗ್ಗಡೆ, ಸಿದ್ಧರಾಮ ಹೊನ್ಕಲ್, ಆರ್ಯಾಂಬ ಪಟ್ಟಾಭಿ, ಪಿ.ಎ. ಲೋಕಾಪುರ, ಎಂ. ರಾಜಗೋಪಾಲ್, ಜಿ.ಎನ್. ಮೋಹನ, ಪಾಟೀಲ ಪುಟ್ಟಪ್ಪ, ಪದ್ಮಾಗುರುರಾಜ್, ಮಿತ್ತೂರ, ಟಿ.ಆರ್. ನಾಗಪ್ಪ, ಪ್ರೊ.ಬಿ. ವಿರೂಪಾಕ್ಷಪ್ಪ, ಪ್ರಭಾಕರ ಶಿಶಿಲ, ಮತ್ತಿಹಳ್ಳಿ ನಾಗರಾಜ್, ಕುಲಶೇಖರಿ, ಸುಭಾಷಿಣಿ, ಲೀಲಾವತಿ ದೇವದಾಸ್, ನೇಮಿಚಂದ್ರ, ಹೇಮಲತಾ ಮಹಿಷಿ ಮುಂತಾದ ನೂರಾರು ಪ್ರವಾಸ ಲೇಖಕರನ್ನು ಗುರುತಿಸಿದ್ದಾರೆ.

---

13. ಸಂ. ಮಲ್ಲೇಪುರಂ ಜಿ. ವೆಂಕಟೇಶ್ ; ಪ್ರವಾಸ ಸಾಹಿತ್ಯ ಒಂದು ಅಧ್ಯಯನ; ಹೊನ್ನ ಪ್ರಕಾಶನ, ಬೆಂ. ಪು -10

ಸಾಹಿತ್ಯವೆಂಬುದು ನಿಂತ ನೀರಲ್ಲ. ಸದಾಕಾಲ ಪ್ರವಹಿಸುವ ಪ್ರಕ್ರಿಯೆ ಹಾಗಾಗಿ 2000 ಇಸ್ವಿಯ ನಂತರವು ಸಾಕಷ್ಟು ಪ್ರವಾಸ ಕಥನಗಳು ಬಂದಿವೆ. ರಹಮತ್ ತರೀಕೆರೆ, ರಘೋತ್ತಮ ತೀರ್ಥ, ಎಸ್.ವಿದ್ಯಾಶಂಕರ್, ಎಸ್. ಕವೀಶ್ವರ, ಬಿ.ಜಿ. ರಮೇಶ್, ಐ ಸೇಸುನಾಥನ್, ಅರ್ಚನ ಭಾರದ್ವಾಜ್, ಡಾ.ವಿ. ಗೋಪಾಲಕೃಷ್ಣ, ಪ್ರೇಮಾಭಟ್, ಆರ್.ಡಿ.ಜಿ., ತಾ. ಶ್ರೀ ನಾಗರಾಜರಾಯ, ವಿ.ಎಸ್. ಕುಮಾರ್, ಗೌರಿಸತ್ಯ, ಹೊಳಲ್ಕೆರೆ ಶ್ರೀಪಾಲಶ್ರೇಷ್ಠಿ ವಸಂತಕುಮಾರ್, ಸಿ.ಎಸ್. ದ್ವಾರಕಾನಾಥ, ಜಿ.ಎನ್. ಮೋಹನ್, ಪ್ರಶಾಂತ್‌ಬೀಚಿ. ಮುಂತಾದವರು ಪ್ರವಾಸ ಸಾಹಿತ್ಯದ ರಚನೆಗೈದಿದ್ದಾರಾದ್ದರಿಂದ ಈ ಕಾಲಘಟ್ಟ ಆಧಾರದ ವಿಂಗಡನೆ ಅಷ್ಟು ಸಮಂಜಸವಲ್ಲವೆಂದು ಕಾಣುತ್ತದೆ.

ವರದರಾಜ ಹುಯಿಲುಗೋಳ, ಜಿ.ಎಸ್. ವಡಗಾಂವಿ, ಸಾ.ಶಿ. ಮರುಳಯ್ಯ, ಎಲ್.ಎಸ್. ಶೇಷಗಿರಿರಾವ್, ಬಿ.ಎ. ವಡಗಾಂವಿ, ಸಾ.ಶಿ. ಮರುಳಯ್ಯ, ಎಲ್.ಎಸ್. ಶೇಷಗಿರಿರಾವ್, ಬಿ.ಎ. ವಿವೇಕರೈ, ಎಸ್. ವಿದ್ಯಾಶಂಕರ್, ಎನ್.ಎಸ್. ತಾರಾನಾಥ, ಸಂತೋಷ್‌ಕುಮಾರ್ ಗುಲ್ವಾಡಿ, ಮಲ್ಲೇಪುರಂ ವೆಂಕಟೇಶ್, ಎಂ ಆರ್ಮುಗಂ, ನರಗಳ್ಳಿ ಬಾಲಸುಬ್ರಹ್ಮಣ್ಯಂ ಮುಂತಾದ ಚಿಂತಕರು ಇದರ ಬಗೆ, ಲಕ್ಷಣ, ಪ್ರಯೋಜನ, ಸ್ವರೂಪಗಳ ಆಧಾರದ ಮೇಲೆ ಪ್ರವಾಸ ಕಥನವನ್ನು ವಿಭಾಗಿಸಿದ್ದಾರೆ ಕೆಲವರ ವಿಭಾಗಕ್ರಮವು ಒಳಮೈಯನ್ನು ಆಧರಿಸಿದ್ದರೆ ಇನ್ನು ಕೆಲವರದ್ದು ಅದರ ರೂಪ, ಉದ್ದೇಶಗಳನ್ನು ಆಧರಿಸಿದ್ದಾಗಿದೆ,

ಮಲ್ಲೇಪುರಂ ವೆಂಕಟೇಶ್‌ರವರು ಅದರ ಒಳಮೈಯನ್ನು ಆಧರಿಸಿ ಈ ರೀತಿ ವಿಭಾಗಿಸಿದ್ದಾರೆ.

1. ಗದ್ಯ ನಿರೂಪಣೆ
2. ಕಥನಾತ್ಮಕ ಶೈಲಿ
3. ಆತ್ಮಕಥನದ ನಿವೇದನೆ
4. ಪ್ರವಾಸ ಕಥನದ ವಸ್ತು ದ್ರವ್ಯವೆಂದು ಗುರುತಿಸಿದ್ದಾರೆ [14]

ವರದರಾಜ ಹುಯಿಲಗೋಳರ ವಿಭಾಗಕ್ರಮವು ಪ್ರವಾಸ ಕಥನದ ರೂಪವನ್ನು ಆಧರಿಸಿದೆ.

1. ಪತ್ರರೂಪದ ಪ್ರವಾಸ ಸಾಹಿತ್ಯ
2. ದಿನಚರಿ ಪ್ರವಾಸ ಸಾಹಿತ್ಯ

---

14. ಮಲ್ಲೇಪುರಂ ಜಿ. ವೆಂಕಟೇಶ್; ಪ್ರವಾಸ ಸಾಹಿತ್ಯ ಒಂದು ಅಧ್ಯಯನ; ಹೊನ್ನ ಪ್ರಕಾಶನ ಬೆಂಗಳೂರು

3. ಕಥಾರೂಪ ಪ್ರವಾಸ ಸಾಹಿತ್ಯವೆಂದು ಗುರುತಿಸಿದ್ದಾರೆ. [15]

ಸಾ.ಶಿ. ಮರುಳಯ್ಯನವರ ವಿಭಾಗಕ್ರಮವು ಪ್ರವಾಸ ಸಾಹಿತ್ಯದ ಉದ್ದೇಶವನ್ನು ಆಧರಿಸಿದೆ.

1. ತೀರ್ಥಯಾತ್ರಾ ಪ್ರವಾಸ ಸಾಹಿತ್ಯ

2. ಸಾಂಸ್ಕೃತಿಕ ಪ್ರವಾಸ ಸಾಹಿತ್ಯ

3. ಶೈಕ್ಷಣಿಕ ಪ್ರವಾಸ ಸಾಹಿತ್ಯ

4. ವ್ಯಾವಹಾರಿಕ ಪ್ರವಾಸ ಸಾಹಿತ್ಯ

5. ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯವೆಂದು ಗುರುತಿಸಿದ್ದಾರೆ. [16]

ವಿದ್ಯಾಶಂಕರು ಅಧ್ಯಯನದ ಅನುಕೂಲಕ್ಕಾಗಿ ಆರು ಬಗೆಗಳಲ್ಲಿ ವಿಭಾಗಿಸಿದ್ದಾರೆ.

1. ವಿಶ್ವಪರ್ಯಟನ ಸಾಹಿತ್ಯ

2. ಬಿಡಿ ಬಿಡಿ ದೇಶಗಳ ಪ್ರವಾಸ ಸಾಹಿತ್ಯ

3. ಭರತಖಂಡ ಪ್ರವಾಸ ಸಾಹಿತ್ಯ

4. ತೀರ್ಥಯಾತ್ರಾ ಸಾಹಿತ್ಯ

5.ಕರ್ನಾಟಕ ಪ್ರವಾಸ ಸಾಹಿತ್ಯ

6. ಅನುವಾದ ಪ್ರವಾಸ ಸಾಹಿತ್ಯ [17]

ಇವರ ಈ ವಿಂಗಡನಾಕ್ರಮದಿಂದ ಸಮಗ್ರ ಅಧ್ಯಯನ ಸಾಧ್ಯವಾಗುತ್ತದೆ. ಬರವಣಿಗೆಯ ವೈವಿಧ್ಯತೆ, ಬೇರೆ ಬೇರೆ ದೇಶಗಳ ಅರಿವು, ಆಸಕ್ತಿ, ಒಲವು ನಿರೀಕ್ಷೆ ಇವುಗಳನ್ನಾಧರಿಸಿ ಅಧ್ಯಯನ ಮಾಡಲು ಸಾಧ್ಯವಾಗುತ್ತದೆ ಎಂಬುದು ವಿದ್ಯಾಶಂಕರರ ಅಭಿಪ್ರಾಯ.

ಡಾ. ಎನ್.ಎಸ್. ತಾರಾನಾಥರವರು ವಿಶ್ವದ ಬೇರೆ ಬೇರೆ ಭಾಷೆಗಳಲ್ಲಿ ಬಂದಿರುವ ಪ್ರವಾಸಕಥನವನ್ನು ಗಮನದಲ್ಲಿರಿಡಿಕೊಂಡು ಈ ರೀತಿ ವಿಭಾಗಿಸಿದ್ದಾರೆ.

1. ಮಾಹಿತಿ ಕಥನ ಪ್ರವಾಸ ಸಾಹಿತ್ಯ

---

15. ವರದರಾಜ ಹುಯಿಲಗೋಳ; ಪ್ರವಾಸಸಾಹಿತ್ಯ; ಪ್ರಬುದ್ಧ ಕರ್ನಾಟಕ, ಬೆಂಗಳೂರು ಪು - 349

16. ಸಾ.ಶಿ. ಮರುಳಯ್ಯ; ಪ್ರವಾಸ ಸಾಹಿತ್ಯ; ಕನ್ನಡ ನುಡಿ

17. ಡಾ॥ವಿದ್ಯಾಶಂಕರ್ ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಸ್ನೇಹ ಪ್ರಕಾಶನ, ಬೆಂ ಪು- 67

2. ತೋರು ವಾಸ್ತವತೆಯ ಭ್ರಾಮಕ ಪ್ರವಾಸ ಸಾಹಿತ್ಯ

3. ನಿರ್ದಿಷ್ಟ ಉದ್ದೇಶದ ಅನುಭವಗಳನ್ನು ವರದಿಯಾಗಿಸದೆ ಸಾಹಿತ್ಯವಾಗಿಸುವ ಪ್ರವಾಸ ಸಾಹಿತ್ಯ [18]

20ನೇ ಶತಮಾನದ ಕೊನೆಯಲ್ಲಿ ನಾನಾ ಕಾರಣಗಳಿಗಾಗಿ, ಜನಸಾಮಾನ್ಯರು, ಸಾಹಿತಿಗಳು, ಕಲಾವಿದರು, ಶೈಕ್ಷಣಿಕ ಸಾಂಸ್ಕೃತಿಕ ಅಧ್ಯಯನಕಾರರು, ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿವಿಧ ಸಂಘ ಸಂಸ್ಥೆಗಳಿಂದ ಆಹ್ವಾನಿತರಾದವರು ಇಂಜಿನೀಯರುಗಳು, ವೈದ್ಯಕೀಯ ಸಂಶೋಧನೆಗೆ ತೆರಳಿದವರು, ಡಾಕ್ಟರುಗಳು ವಿಜ್ಞಾನಿಗಳು ಹೀಗೆ ಬೇರೆ ಬೇರೆ ವೃತ್ತಿಯವರು ವಿದೇಶಗಳಿಗೆ ಹೋಗಿ ಬಂದ ಅನುಭವ ಲೇಖನಗಳು ಪ್ರವಾಸ ಕಥನಗಳಾಗಿ ಬಂದಿವೆ. ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರವಾಸ ಕಥನಗಳ ಇನ್ನೊಂದು ಪ್ರಕಾರದ ಪಟ್ಟಿಯನ್ನು ಮಾಡಬಹುದೆಂದು ಡಾ. ಲತಾಗುತ್ತಿಯವರು ಹೇಳಿದ್ದಾರೆ. ಅವರ ಪ್ರಕಾರ

1. ತೀರ್ಥಯಾತ್ರಾ ಪ್ರವಾಸ ಸಾಹಿತ್ಯ

2. ಸಾಂಸ್ಕೃತಿಕ ಪ್ರವಾಸ ಸಾಹಿತ್ಯ

3. ಶೈಕ್ಷಣಿಕ ಪ್ರವಾಸ ಸಾಹಿತ್ಯ

4. ವ್ಯಾವಹಾರಿಕ ಪ್ರವಾಸ ಸಾಹಿತ್ಯ

5. ಪ್ರವಾಸ ಪ್ರೇಮಿ, ಅಲೆಮಾರಿ ಪ್ರವಾಸ ಸಾಹಿತ್ಯ

6. ಆಹ್ವಾನಿತ ಪ್ರವಾಸ ಸಾಹಿತ್ಯ

7. ಅನುವಾದಿತ ಪ್ರವಾಸ ಸಾಹಿತ್ಯ ಮತ್ತು

8. ಸಾಹಸಯುಕ್ತ ಪ್ರವಾಸ ಸಾಹಿತ್ಯ [19]

ಒಟ್ಟಾರೆ ಇಪ್ಪತ್ತನೆಯ ಶತಮಾನದ ಪ್ರವಾಸ ಸಾಹಿತ್ಯ ವಿಸ್ತೃತವಾದ ಆಳ, ಉದ್ದಗಲ, ಎತ್ತರವನ್ನೊಳಗೊಂಡಿದೆ. ಪ್ರತಿಯೊಬ್ಬ ಲೇಖಕನ ವೈವಿಧ್ಯಮಯವಾದ ಅನುಭವ ದಾಖಲೆಗಳು ಯಥೇಚ್ಛವಾಗಿ ದೊರೆಯುತ್ತದೆ.

ಕನ್ನಡದಲ್ಲಿ ಪ್ರವಾಸ ಕಥನವೆಂದಾಕ್ಷಣ ನಮ್ಮ ನೆನಪಿನ ಅಂಗಳದಲ್ಲಿ ನುಸುಳುವುದು ಅಮೆರಿಕಾ ಕುರಿತ ಪ್ರವಾಸ ಕಥನಗಳೇ. ಪ್ರಪಂಚಕ್ಕೆ ದೊಡ್ಡಣ್ಣನಾಗಿರುವ ಅಮೆರಿಕಾದ ವೈಭವಕ್ಕೆ

---

18. ಡಾ. ಎನ್.ಎಸ್. ತಾರಾನಾಥ; ಪ್ರವಾಸ ಸಾಹಿತ್ಯ ; ಶಕ್ತಿಪ್ರಕಾಶನ, ಮೈಸೂರು, ಪುಟ- 13-16

19. ಡಾ. ಲತಾಗುತ್ತಿ; ಪ್ರವಾಸ ಸಾಹಿತ್ಯ ವಿಶ್ವ ಸಂಸ್ಕೃತಿಗಳು; ಸಜಿನ್ ಪಬ್ಲಿಷರ್ಸ್, ಬೆಂ ಪು 33-34

ಮನಸೋತಿರುವವರು ಅನೇಕ. ಅಲ್ಲಿನ ಅರ್ಥವ್ಯವಸ್ಥೆ ನಮ್ಮ ದೇಶೀಯರನ್ನು ಅಯಸ್ಕಾಂತದಂತೆ ತನ್ನೆಡೆಗೆ ಸೆಳೆದಿದೆ. ಜಾಗತೀಕರಣದ ಈ ಕಾಲದಲ್ಲಿ ಅಲ್ಲಿಗೆ ಹೋಗಿ ನೆಲಿಸಿರುವವರ ಸಂಖ್ಯೆಯೂ ಹೆಚ್ಚು. ಅಮೆರಿಕಾ ಕುರಿತು ಬರೆದಿರುವ ಪ್ರವಾಸ ಕಥನಗಳು ಸುಮಾರು 100ಕ್ಕಿಂತ ಹೆಚ್ಚಿವೆ. ಅವುಗಳಲ್ಲಿ ಕೆಲವು 'ನಮ್ಮ ಕಾಗದಗಳು' (ನಾಡಿಗ ಕೃಷ್ಣಮೂರ್ತಿ), 'ಕೊಲಂಬಿಯಾ ಯಾತ್ರೆ (ವೈ.ಎಸ್. ಲೂಯಿಸ್), 'ಅಮೆರಿಕಾದಲ್ಲಿ ನಾನು (ಬಿ.ಜಿ. ಎಲ್ ಸ್ವಾಮಿ), 'ನಾನು ಕಂಡ ಅಮೆರಿಕ' (ಪದ್ಮ ಉಮಾಪತಿ) 'ಪಾತಾಳಕ್ಕೆ ಪಯಣ (ಶಿವರಾಮಕಾರಂತ), 'ಕೆನಡಾದಲ್ಲಿ ಕನ್ನಡಿಗ' (ಬಿ.ಶೆಟ್ಟಿ. ಪೆಂಡಕೂರು), 'ಅಮೆರಿಕದಲ್ಲಿ ಕನ್ನಡಿಗ' (ಜಿ.ಎಸ್. ಶಿವರುದ್ರಪ್ಪ), 'ನಾನೂ ಅಮೆರಿಕೆಗೆ ಹೋಗಿದ್ದೆ' (ಕೃಷ್ಣಾನಂದ ಕಾಮತ್), 'ಅಮೆರಿಕಾದಲ್ಲಿ ನಾನು ಶಾಂತಿ (ಪ್ರಭುಶಂಕರ), ಇಂದಿಲ್ಲ ನಾಳೆ (ವಿನಾಯಕ), ನಾನು ಮತ್ತು ಅಮೆರಿಕ (ಲಅತ ಸುಬ್ಬರಾವ್) 'ಅಮೆರಿಕದಲ್ಲಿ ಅರವತ್ತು ದಿನಗಳು' (ಕೆ. ಗಣೇಶಮಲ್ಯ), 'ಅಮೆರಿಕಾದಲ್ಲಿ ಓರ್ವ ಹಿಂದು" (ಬಿ.ವಿ. ರಾಮನ್) ಅಮೆರಿಕಾದಲ್ಲಿ ಗೊರೂರು' ಗೊರೂರು ರಾಮಸ್ವಾಮಿ ಅಯ್ಯಂಗಾರ್) 'ಅಪರವಯಸ್ಕನ ಅಮೆರಿಕಾ ಯಾತ್ರೆ' (ಎ.ಎನ್. ಮೂರ್ತಿರಾವ್) ನಾನು ಕಂಡ ಅಮೆರಿಕ (ಪದ್ಮ ಉಮಾಪತಿ) ಅಮೆರಿಕ ಪ್ರವಾಸದ ಅನುಭವಗಳು (ಕೆ.ಎನ್. ಕೃಷ್ಣಮೂರ್ತಿರಾವ್), 'ನಾ ಕಂಡ ಅಮೆರಿಕಾ (ರಾ.ಯ. ಧಾರವಾಡಕರ್), 'ಅಮೆರಿಕದ ಅನುಭವ' (ಉ.ಕಾ. ಸುಬ್ಬರಾಯಚಾರ್) ಅಮೆರಿಕಾ ಭಾರತೀಯನ ದೃಷ್ಟಿಯಲ್ಲಿ(ಕೆ.ಎನ್. ನಂಜುಂಡಶಾಸ್ತ್ರಿ) 'ಮಂಜಿನ ಮಡಿಲಲ್ಲಿ (ವೀ. ಪುಟ್ಟಮಾದಪ್ಪ) ಮುಂತಾದವು. ಈ ಪ್ರವಾಸ ಕಥನಗಳ ಸ್ವರೂಪ, ರೂಪ, ರುಚಿ, ಅಭಿರುಚಿ ನಿರೂಪಣಾ ಶೈಲಿಗಳೆಲ್ಲವೂ ಒಂದಕ್ಕಿಂತ ಒಂದು ಭಿನ್ನ. ಈ ಪ್ರವಾಸ ಕಥನಗಳಲ್ಲಿ ಹೊಸ ಸೇರ್ಪಡೆ ದ್ವಾರಕಾನಾಥರ 'ಅಮೆರಿಕಾ ಆ ಮುಖ ಒಂದು.

ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಬಗೆಗೆ ನಡೆದಿರುವ ಅಧ್ಯಯನಗಳು ಕಡಿಮೆ. ಬೆರಳೆಣಿಕೆಯ ಲೇಖಕರು ಅಲ್ಲಲ್ಲಿ ಒಂದಿಷ್ಟು ಚರ್ಚಿಸಿ ಲೇಖನಗಳನ್ನು ಬರೆದಿದ್ದಾರೆ.

## 5. ಗಾಂಧಿ ಮೆಟ್ಟಿದ ನಾಡಿನಲ್ಲಿ ಒಂದು ವಿಶ್ಲೇಷಣೆ

ಮಹಾತ್ಮ ಗಾಂಧೀಜಿಯವರು ತಮ್ಮ ಹೋರಾಟವನ್ನು ಮೊದಲು ಪ್ರಾರಂಭಿಸಿದ್ದು ದಕ್ಷಿಣಾ ಆಫ್ರಿಕಾದಲ್ಲಿ ಅದರಲ್ಲೂ ಮುಖ್ಯವಾಗಿ ವರ್ಣಭೇದ ನೀತಿಯ ವಿರುದ್ಧವಾಗಿ ಇಂತ ವರ್ಣಭೇದವು ನಮ್ಮ ದೇಶದಲ್ಲಿ ಜಾತಿ ಭೇದದ ಹೆಸರಿನಲ್ಲಿದೆ. ವಿಶ್ವಸಂಸ್ಥೆ ದಕ್ಷಿಣ ಆಫ್ರಿಕಾದ ದರ್ಬಾನಿನಲ್ಲಿ ಆಯೋಜಿಸಿದ 'ವಿಶ್ವವರ್ಣಭೇದ ವಿರೋಧಿ' ಸಮಾವೇಶಕ್ಕೆ ದ್ವಾರಕಾನಾಥರು ಭಾಗವಹಿಸಿ ಅಲ್ಲಿ ಅವರಿಗಾದ ಅನುಭವಗಳನ್ನು ತಮ್ಮ ಪ್ರವಾಸ ಕಥನವಾದ 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಕೃತಿಯಲ್ಲಿ ನಮ್ಮ ಮುಂದೆ ಬಿಚ್ಚಿ ಹರವಿದ್ದಾರೆ.

ಇಲ್ಲಿ ಅವರು ಸಮಾವೇಶದ ನಿಮಿತ್ತವಾಗಿ ಹೋಗಿದ್ದರಿಂದ ಸಮಾವೇಶದಲ್ಲಿ ನಡೆದ ಪ್ರತಿಯೊಂದು ಘಟನೆಯನ್ನು ವಿವರಿಸುವುದರ ಜೊತೆ ಅಲ್ಲಿನ ವರ್ಣಭೇದ ಹಾಗೂ ಜಾತಿಭೇದಗಳನ್ನು ವಿವರಿಸುತ್ತಾ ಅಲ್ಲಲ್ಲಿ ಅವುಗಳನ್ನು ತೌಲನೀಕರಿಸಿದ್ದಾರೆ. ಭಾರತೀಯರು ಅವರ ಪೂರ್ವಿಕರ ಕಾಲದಲ್ಲಿ ದಕ್ಷಿಣ ಭಾರತಕ್ಕೆ ಹೋಗಿ ನೆಲೆಸಿ ಇಂದು ತಮ್ಮ ಭಾಷೆ, ಜಾತಿ ಧರ್ಮಗಳೆಲ್ಲವನ್ನು ಮೆಟ್ಟಿ ನಿಜವಾದ ರೂಪದಲ್ಲಿ ಭಾರತೀಯರಾಗಿರುವುದನ್ನು ನಮ್ಮ ಮುಂದಿಟ್ಟಿದ್ದಾರೇ ಅಷ್ಟೇ ಅಲ್ಲದೆ ಆಫ್ರಿಕನ್‌ರಂತೆ ಶೋಷಣೆಗೆ ಒಳಗಾಗಿದ್ದ ನಮ್ಮವರು, ಇಂದು ತಾವೇ ಶೋಷಕರಾಗಿರುವುದನ್ನು ಸೂಕ್ಷ್ಮವಾಗಿ ತಮ್ಮ ಕಥನದಲ್ಲಿ ಹೇಳಿದ್ದಾರೆ. ಹಾಗಾಗಿ ಇವರ 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಕೃತಿಯು ಒಂದು ಸಾಧಾರಣವಾದ ಪ್ರವಾಸ ಕಥನವಾಗಿರದೇ ಸೈದ್ಧಾಂತಿಕವಾದ ಹಿನ್ನೆಲೆಯನ್ನು ಒಳಗೊಂಡಿರುವ ಕಥನವಾಗಿದೆ. ಇವರ ಈ ಕಥನವನ್ನು ಮೇಲೆ ತಿಳಿಸಿದ ಮೂರು ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.

### 5.1. ವರ್ಣಭೇದ ಹಾಗೂ ಜಾತಿ ಭೇದ :

ದ್ವಾರಕಾನಾಥರು ದಕ್ಷಿಣ ಆಫ್ರಿಕಾದ ಪ್ರವಾಸವನ್ನು ಕೈಗೊಂಡಿದ್ದೆ ವಿಶ್ವಸಂಸ್ಥೆ ಆಯೋಜಿಸಿದ ವರ್ಣಭೇದ ವಿರೋಧಿ ಸಮಾವೇಶದಲ್ಲಿ ಭಾಗವಹಿಸಿದರು. ಇಲ್ಲಿ ವರ್ಣಭೇದ ವೆಂದಾಗ ಬರೀ ವರ್ಣಭೇದವೇ ಆಗಬೇಕೆಂದೇನೂ ಇಲ್ಲ. ಯಾವುದೇ ರೀತಿಯ ಜನಾಂಗ ಭೇದ, ಜಾತಿಭೇದಗಳು ಇದರಡಿಯಲ್ಲಿ ಬರುತ್ತವೆ. ಈ ವಿಚಾರವಾಗಿ ಅಲ್ಲಿ ಚರ್ಚೆ ನಡೆದು ಅದನ್ನು ಅಳಿಸಿ ಹಾಕುವ ಪ್ರಯತ್ನವಾಗಿ ಈ ಸಮಾವೇಶವನ್ನು ಹಮ್ಮಿಕೊಳ್ಳಲಾಯಿತು. ಇಲ್ಲಿ ನಿಶ್ಚಿತವಾದ ಉದ್ದೇಶದ ಹಿನ್ನೆಲೆಯಲ್ಲಿ ಪ್ರವಾಸ ಕೈಗೊಂಡಿದ್ದರಿಂದ ಇವರ ಪ್ರವಾಸ ಕಥನದ ತುಂಬೆಲ್ಲಾ ವರ್ಣಭೇದ ಹಾಗೂ ಜಾತಿಭೇದದ ವಿಷಯಗಳೇ ಹರಡಿಕೊಂಡಿದೆ.

ದ್ವಾರಕನಾಥರು ವರ್ಣಭೇದ, ಅಸಮಾನತೆಯನ್ನು ಸೌತ್ ಆಫ್ರಿಕನ್ ಏರ್‌ವೇಸ್ ವಿಮಾನ ದಲ್ಲಿಯೇ ಗಮನಿಸಿದ್ದಾರೆ. ವಿಮಾನದಲ್ಲಿ "ಲಗುಬಗೆಯಿಂದ ಓಡಾಡುತ್ತಿದ್ದ ಕೊಂಚ ಮಧ್ಯವಯಸ್ಸಿನ ಬಿಳಿಯ ಗಗನಸಖಿಯನ್ನು ಬಿಟ್ಟರೆ ತೀರಾ ಕಷ್ಟದ ಕೆಲಸಗಳನ್ನೆಲ್ಲಾ ಒಬ್ಬ ಕಪ್ಪು ಗಗನಸಖಿ

ಮಾಡುತ್ತಿದ್ದಳು" ಎಂದು ಹೇಳುತ್ತಾರೆ.[1] ದಕ್ಷಿಣ ಆಫ್ರಿಕಾ ಸ್ವತಂತ್ರವಾಗಿದ್ದರೂ ಇನ್ನೂ ಅಲ್ಲಿ ವರ್ಣಭೇದ, ಅಸಮಾನತೆಯನ್ನು ಗುಲಾಮಗಿರಿಯನ್ನು ಸಂಪೂರ್ಣವಾಗಿ ತೊಡೆದು ಹಾಕಲಾಗಿಲ್ಲ ವೆಂಬುದು ಅವರ ಈ ಮಾತುಗಳಿಂದ ವ್ಯಕ್ತವಾಗಿದೆ.

ಲೇಖಕರು ಜೋಹಾನ್ಸ್‌ಬರ್ಗನ ವಿಮಾನ ನಿಲ್ದಾಣದಲ್ಲಿ ಇಳಿದ ಮೇಲೂ ಅಲ್ಲಿ ಆಫ್ರಿಕಾದ ಸಂಸ್ಕೃತಿಯನ್ನು ಬಿಂಬಿಸುವ ಕಲಾಕೃತಿಗಳ ನಡುವೆಯೂ ಅವರ ಮನಸ್ಸು ಸೂಕ್ಷ್ಮವಾಗಿ ಗಮನಿಸುವುದು ವಿಮಾನ ನಿಲ್ದಾಣವನ್ನು ಗುಡಿಸುತ್ತಿದ್ದ ಕಪ್ಪು ಮಹಿಳೆಯರನ್ನು "ಹೆಂಗಸರು ವಿಮಾನ ನಿಲ್ದಾಣವನ್ನು ಗುಡಿಸುತ್ತಾ, ಒರೆಸುತ್ತಾ ಸ್ವಚ್ಛಗೊಳಿಸುತ್ತಿದ್ದರು. ಆಶ್ಚರ್ಯವೆಂದರೆ ಅಲ್ಲಿನ ಶುದ್ಧೀಕರಿಸುವ ಕಾರ್ಯವನ್ನು ಮಾಡುತ್ತಿದ್ದವರೆಲ್ಲಾ ಕರಿಯರೇ!" ಎಂದು ಅಚ್ಚರಿವ್ಯಕ್ತ ಪಡಿಸುವುದರ ಜೊತೆಗೆ ಕರಿಯರನ್ನು ಭಾರತದ ದಲಿತರೊಂದಿಗೆ ಹೋಲಿಸಿವುದು. "ಭಾರತದಲ್ಲಿ ಜಾಡಮಾಲಿಗಳಾಗಿ ಕೆಲಸ ಮಾಡುವವರೆಲ್ಲಾ ಹೇಗೆ ದಲಿತರೋ, ಹಾಗೇ ಅಲ್ಲಿನ ಜಾಡಮಾಲಿಗಳೆಲ್ಲಾ ಕರಿಯರೆ" ಎಂದು ಕರಿಯರು ಹಾಗೂ ದಲಿತರ ನಡುವೆ ಇರುವ ಸಾಮ್ಯತೆ ಯನ್ನು ಗುರುತಿಸಿದ್ದಾರೆ. ಅಷ್ಟೇ ಅಲ್ಲದೆ ನಮ್ಮಲ್ಲಿ ದಲಿತರಿಗೆ ಸರ್ಕಾರವು ಹೇಗೆ ಮೀಸಲಾತಿ ಆಧರಿಸಿ ಬೆರಳೆಣಿಕೆಯ ದಲಿತರಿಗೆ ಕೆಲಸವನ್ನು ನೀಡುತ್ತದೆಯೋ ಅದೇ ರೀತಿ ಅಲ್ಲಿನ ವಿಮಾನ ನಿಲ್ದಾಣದಲ್ಲಿ"ಅಫಿಷಿಯಲ್ ಕೆಲಸಗಳನ್ನು ಮಾಡುತ್ತಿದ್ದವರೆಲ್ಲಾ ಬಹುತೇಕ ಬಿಳಿಯರು. ಅಲ್ಲಲ್ಲಿ ತೋರಿಸಲಿಕ್ಕೆಂಬಂತೆ ಬೆರಳೆಣಿಕೆಯಷ್ಟು ಮಂದಿ ಮಾತ್ರ ಕರೀ ಹೆಣ್ಣುಮಕ್ಕಳು ಕಾಣುತ್ತಿದ್ದರು. ಭಾರತದಲ್ಲಿ ಮೀಸಲಾತಿಯಲ್ಲಿ ದಲಿತರನ್ನು ನೇಮಿಸಿದಂತೆ"[2]ಎಂದಿದ್ದಾರೆ. ಭಾರತದ ದಲಿತರ, ಅಲ್ಲಿನ ಕರಿಯರ ಸ್ಥಿತಿಯಲ್ಲಿ ಅಂತ ವ್ಯತ್ಯಾಸವೇನು ಇಲ್ಲ. ಭಾರತದ ಸಂವಿಧಾನದಲ್ಲಿ ಮೀಸಲಾತಿ ಇದ್ದರು. ಇಂದು ಬಹುತೇಕ ಉನ್ನತ ಹುದ್ದೆಗಳನ್ನು ಅಲಂಕರಿಸಿರುವವರು ಮೇಲ್ಜಾತಿಯ ಜನರೇ ಅದೇ ರೀತಿ ಕರಿಯರು ಸ್ವತಂತ್ರರಾಗಿದ್ದರೂ ಅವರ ಸ್ಥಿತಿಯಲ್ಲಿ ಹೇಳಿಕೊಳ್ಳುವಂತ ಬದಲಾವಣೆ ಕಂಡು ಬಂದಿಲ್ಲ.

ವಿಶ್ವವರ್ಣಭೇದ ವಿರೋಧಿ ಸಮಾವೇಶವನ್ನು ಡರ್ಬಾನ್‌ನ ಕಿಂಗ್ಸ್‌ಮೀಡ್ ಮೈದಾನದಲ್ಲಿ ಆಯೋಜಿಸಲಾಗಿತ್ತು. ಅಲ್ಲಿ ವಿವಿಧ ದೇಶಗಳಿಂದ ವರ್ಣಭೇದ, ಜನಾಂಗ ಭೇದ, ಜಾತಿಬೇಧಗಳಿಗೆ ಒಳಗಾದವರೆಲ್ಲಾ ಬಂದಿದ್ದರು ಅವರುಗಳ ಭಾಷೆ ಸಂಸ್ಕೃತಿ, ಆಕಾರ ಬಣ್ಣವೆಲ್ಲವೂ ವಿಭಿನ್ನವಾಗಿದ್ದರೂ ಅವರೆಲ್ಲರ ನೋವು, ಸಮಸ್ಯೆ ಒಂದೇ ಆಗಿತ್ತೆಂದು 'ದೇಶಕ್ಕೆ ಬಣ್ಣ, ದೇಹಕ್ಕೆ ಬಣ್ಣ, ಆತ್ಮಕ್ಕೆ ಯಾವ ಬಣ್ಣ?' ಎಂಬ ಅಧ್ಯಾಯದಲ್ಲಿ ಹೇಳುತ್ತಾರೆ. "ಇಷ್ಟೆಲ್ಲಾ ಬಣ್ಣ, ಆಕಾರ, ಭಾಷೆ, ಸಂಸ್ಕೃತಿಗಳನ್ನು ಹೊಂದಿದ್ದ ಈ ವಿಭಿನ್ನ ಜನರೆಲ್ಲಾ ಯಾಕೆ ಒಂದೇ ಕಡೆ ಸೇರಿದ್ದರು? ಇವರೆಲ್ಲರ ನೋವು ಒಂದೇ ಆಗಿತ್ತು, ಇವರೆಲ್ಲರ ಆತ್ಮ ಸಂವೇದನೆಗಳು ಇವರನ್ನೆಲ್ಲಾ ಒಂದೆಡೆ

---

1. ಗಾಂಧಿಮೆಚ್ಚಿದ ನಾಡಿನಲ್ಲಿ ; ಪುಟ -8

2. - ಅದೇ ಪುಟ -10

ತಂದಿದ್ದವು! ದೇಹಕ್ಕೇನೋ ಬಣ್ಣವಿತ್ತು. ಆತ್ಮಕ್ಕಿಲ್ಲವಲ್ಲ"! [3]ಎಂದಿದ್ದಾರೆ. ಇಲ್ಲಿ ಎಲ್ಲರ ಸಮಸ್ಯೆಯೂ ಒಂದೇ, ಅದರಿಂದ ಅನುಭವಿಸಿದ ನೋವು ಒಂದೇ, ಆದರೆ ಸಮಸ್ಯೆಯ ಹೆಸರು ಮಾತ್ರ ಬೇರೆ. ದೇಹದ ಬಣ್ಣ, ಆಕಾರ ಯಾವುದಾದರೇನು ಅದರೊಳಗಿರುವ ಮನುಷ್ಯನೊಬ್ಬನೇ ಶತಮಾನ ಗಳಿಂದ ತಲ್ಲಣಿಸಿದ ನೋವಿನ ಪರಿಹಾರಕ್ಕಾಗಿ 'ಮಾನವ ಕುಲಂ ತಾನೊಂದು ವಲಂ' ಎಂಬಂತೆ ಇಡೀ ವಿಶ್ವದ ಜನತೆಯನ್ನು ಒಂದೆಡೆ ಸೇರಿಸಿದೆ.

ವರ್ಣ ಜಾತಿ, ಭಾಷೆ, ಜನಾಂಗ ಇವೆಲ್ಲವೂ ಬೇರೆ ಬೇರೆಯಾಗಿದ್ದರೂ ಇವೆಲ್ಲದರ ಒಳಗಿರುವ ಆತ್ಮ ಒಂದೇ. ಆ ಆತ್ಮದ ನೋವಿಗೆ ವೇದಿಕೆಯಾಗಿದ್ದ ಈ ಸಮಾವೇಶ ಹಾಗಾಗಿಯೇ ಈ ಸಮಾವೇಶಕ್ಕೆ ಒಂದು ಅರ್ಥ ಬಂದಿತ್ತು. "ಈ ಜಗತ್ತಿನಲ್ಲಿ ಇಷ್ಟೆಲ್ಲಾ ವರ್ಣದ್ವೇಷ, ಜಾತಿದ್ವೇಷ, ಭಾಷಾದ್ವೇಷ, ಜನಾಂಗ ದ್ವೇಷಗಳಿದ್ದರೂ ಇವನ್ನೆಲ್ಲಾ ಏಕಕಾಲಕ್ಕೆ ಮರೆಸಿ ವಿಶ್ವ ಮಾನವ ತತ್ವವನ್ನು ಮೆರೆಯುವ ಸಮಾವೇಶ ಇಡೀ ಜಗತ್ತಿಗೆ ಯಾಕೆ ಮುಖ್ಯವಾಗಿತ್ತು ಎನ್ನುವುದರ ಅರ್ಥ ಇಲ್ಲಿ ಗೋಚರವಾಗುತ್ತಿತ್ತು. [4] ಎಂಬುದರಲ್ಲಿಯೇ ಎಲ್ಲದಕ್ಕಿಂತಲೂ ಮಾನವತೆ ಮಾನವೀಯ ಮೌಲ್ಯಗಳೇ ಮುಖ್ಯ ಎಂಬುದು ಅಡಕವಾಗಿದೆ.

ಈ ಸಮಾವೇಶದಲ್ಲಿ ಎಲ್ಲರ ಗಮನ ಸೆಳೆದಿದೆಂದರೆ ಭಾರತದ ದಲಿತ ಸಮಸ್ಯೆ. 'ದಲಿತರ ಹಕ್ಕು ಮಾನವ ಹಕ್ಕು' ಎಂಬ ಇಂಗ್ಲೀಷ್ ಸ್ಲೋಗನ್ನಿರುವ ಬಟ್ಟೆಯೊಂದನ್ನು ಹಣೆಪಟ್ಟಿ ಕಟ್ಟಿ 'ಕ್ಯಾಸ್ಟ್ ಔಟ್ ಕ್ಯಾಸ್ಟ್' ಎಂಬ ಸ್ಲೋಗನ್ನಿರುವ ಕಪ್ಪು ವೇಸ್ಟ್ ಕೋಟನ್ನು ತೊಟ್ಟು ವಿಶ್ವದಾಖಲಾತಿಯಲ್ಲಿ ಜಾತಿಯನ್ನು ಸೇರಿಸಿ' ಎಂಬ ಸ್ಲೋಗನ್ ಇರುವ ಬ್ಯಾಡ್ಜ್‌ಗಳನ್ನು ಎದೆಯ ಮೇಲೆ ತೊಟ್ಟಿದ್ದೆವು' ಎಂದು ಹೇಳುತ್ತಾ ನಮ್ಮ ಸರ್ಕಾರ ಮರೆಮಾಚಿದ ದಲಿತ ಇಷ್ಯೂವನ್ನು ಎತ್ತಿ ಹಿಡಿಯಲು ಹೀಗೊಂದು ಸಮಸ್ಯೆ ಭಾರತದಲ್ಲಿದೆ ಇನ್ನೂ ಜೀವಂತವಾಗಿದೆ ಎಂಬುದನ್ನು ಜಗಜಾಹೀರುಗೊಳಿಸುವಲ್ಲಿ ಸಫಲತೆಯ ಒಂದೊಂದೇ ಮೆಟ್ಟಿಲನ್ನು ಹತ್ತುತ್ತ ಹೋಗುತ್ತಾರೆ. ನಮ್ಮ ತಮಟೆಯ ನಾದಕ್ಕೆ ಸಮಾವೇಶಕ್ಕೆ ಬಂದಿದ್ದ ಎಲ್ಲಾ ಜನರು ಕುಣಿಯ ತೊಡಗಿದ ವಿಚಾರವನ್ನು ಹೇಳುತ್ತಾ "ನಮ್ಮ ತಮಟೆಗೆ ಎಂಥ ಶಕ್ತಿಯಿದೆ! ಅಂದು ನಮ್ಮ ತಮಟೆ ಇಡೀ ಜಗತ್ತನ್ನು ಕುಣಿಸಿತು. ಅಲ್ಲಿ ನೆರೆದಿದ್ದ ಬಿಳಿಯರು, ಕೆಂಪಗಿರುವವರು ಅವರದೇ ಆದ ಶೈಲಿಯಲ್ಲಿ ಮೆಲ್ಲಗೆ ಕುಣಿದರೆ ಅಲ್ಲಿದ್ದ ಕರಿಯರಂತೂ ಭೂಮಿ ನಡಗುವಂತೆ ಕುಣಿಯತೊಡಗಿದರು" ಎಂದು ನಮ್ಮ ತಮಟೆಯ ನಾದಕ್ಕೆ ಇದ್ದ ಸಮ್ಮೋಹನ ಶಕ್ತಿಯನ್ನು ಹೇಳುತ್ತಾರೆ. ಇಂತ ಇಷ್ಟೆಲ್ಲ ಜನರನ್ನು ಆಕರ್ಷಿಸಿದ ಆ ತಮಟೆಗೂ ಕೂಡ ಜಾತಿಯ ಸೋಂಕಿದೆ ಎಂಬ ವಿಚಾರ ತಿಳಿದಾಗ ನಿಬ್ಬೆರಗಾದರೆಂದು ಈ ಎಲ್ಲಾ ಭೇದಗಳಿಗಿಂತಲೂ ನಮ್ಮ ಜಾತಿಭೇದವು ಬಹಳ ಹಿಂದಿನದು. "ನಿಮ್ಮ ವರ್ಣ ಕೇವಲ ಮುನ್ನೂರು ವರ್ಷಗಳಷ್ಟು ಹಿಂದಿನದಿರಬಹುದು ನಮ್ಮ ಜಾತಿ ಮೂರೂವರೆ

3. - ಅದೇ -ಪುಟ-20

4 - ಅದೇ- ಪುಟ-20

ಸಾವಿರ ವರ್ಷಗಳಷ್ಟು ಹಿಂದಿನದು" ಎಂದು ದಲಿತರ ಯಾತನೆ ವರ್ಣಭೇದಕ್ಕಿಂತಲೂ ಎಷ್ಟೊಂದು ಭೀಕರವಾದದ್ದು ಎಂದು ದಲಿತರ ಮೇಲೆ ನಡೆಯುತ್ತಿರುವ ಹಲ್ಲೆ, ದೌರ್ಜನ್ಯ, ಜೀವಂತ ದಹನಗಳನ್ನು ತಿಳಿಸಿ ಸಮರ್ಥಿಸುತ್ತಾರೆ. ಇದರಿಂದ ಅವರಿಗೆ ದಲಿತರ ಮೇಲಿದ್ದ ಕಾಳಜಿ, ಅವರ ನೋವಿಗೆ ಸ್ಪಂದಿಸುವ ಮನಸ್ಸು ನಮಗೆ ಗೋಚರಿಸುತ್ತದೆ.

'ಇಷ್ಟೆಲ್ಲಾ ಅನ್ಯಾಯ, ಅವಮಾನ, ಕ್ರೌರ್ಯಗಳು ನಿಮ್ಮ ದೇಶದಲ್ಲಿ ತಾಂಡವಾಡುತ್ತಿದ್ದರು ಅಲ್ಲಿನ ಮೀಡಿಯಾ ಏನು ಮಾಡುತ್ತಿವೆ...? ಎಂಬ ಪ್ರಶ್ನೆಗೆ "ಮೀಡಿಯಾ ಯಾರ ಕೈಯಲ್ಲಿದೆ. ಇಲ್ಲಿನ ಸರ್ಕಾರ, ಪೋಲೀಸು, ನ್ಯಾಯ ವ್ಯವಸ್ಥೆ ಮಾನವ ಹಕ್ಕುಗಳು ಯಾರ ನಿಯಂತ್ರಣದಲ್ಲಿವೆ ಎಂದು ವಿವರಿಸುವಲ್ಲಿ ಸಾಕುಸಾಕಾಯಿತು." [5] ಎನ್ನುವಾಗ ಕಾಣದ ಬಲಪಂಥೀಯರ ಕೈಗಳು ಹೇಗೆ ಕೆಲಸ ಮಾಡುತ್ತಿವೆ. ಸ್ವಾತಂತ್ರ್ಯ ಬಂದು 68 ಸಂವತ್ಸರವನ್ನು ಕಂಡಿದ್ದರು ಬುದ್ಧ, ಬಸವಣ್ಣ, ಗಾಂಧಿ, ಅಂಬೇಡ್ಕರಂತವರು ಜಾತೀಯತೆ ವಿರುದ್ಧ ಹೋರಾಡಿ ವಿಶ್ವದ ಗಮನ ಸೆಳೆದಿದ್ದರೂ ಇನ್ನೂ ನಮ್ಮಲ್ಲಿ ಇಂತ ಜಾತಿಭೇದ ಜೀವಂತವಾಗಿರುವುದರ ಬಗ್ಗೆ ಖೇದವನ್ನು ವ್ಯಕ್ತಪಡಿಸಿದ್ದಾರೆ.

ಇಷ್ಟು ಪ್ರಾಚೀನವಾದ ಸಮಸ್ಯೆ ಇಂದಿಗೂ ನಿವಾರಣೆಯಾಗದೆ ಜೀವಂತವಾಗಿರುವಾಗ ನಮ್ಮ ಜವಾಬ್ದಾರಿಯುತವಾದ ಸರ್ಕಾರ ಬೇಜವಾಬ್ದಾರಿಯುತವಾಗಿ ವರ್ತಿಸಿದ್ದು ಮತ್ತು ವಿಶ್ವದ ಜನತೆಯ ಮುಂದೆ ಗೊಂದಲವನ್ನು ಸೃಷ್ಟಿ ಗೊಳಿಸಲು ಪ್ರಯತ್ನಿಸಿದ್ದನ್ನು ತಮ್ಮ ಕಥನದಲ್ಲಿ ಅದ್ಭುತವಾಗಿ ಚಿತ್ತರಿಸಿದ್ದಾರೆ. ಭಾರತದ ಬಗ್ಗೆ ಒಲವಿದ್ದರೂ, ಅವರ ವಸ್ತುನಿಷ್ಠ ಪ್ರಜ್ಞೆ ಮೆಚ್ಚುಗೆಗೆ ಪಾತ್ರವಾಗುತ್ತದೆ.

ಕಿಂಗ್‌ಮೀಡ್ ಸ್ಟೇಡಿಯಂನಲ್ಲಿ ಎನ್‌ಸಿಡಿಹೆಚ್‌ಆರ್ ನ ರಾಷ್ಟ್ರೀಯ ಸಂಚಾಲಕ ಮಾರ್ಟಿನ್ ಮೆಕ್ವಾನ್ ದಲಿತರ ಮೇಲೆ ನಡೆಯುತ್ತಿದ್ದ ಹಲ್ಲೆ, ಕೊಲೆ ದೌರ್ಜನ್ಯಗಳನ್ನು ಎಳೆ ಎಳೆಯಾಗಿ ಬಿಡಿಸಿ ಜಗತ್ತಿನ ಮುಂದೆ ಇಡುತ್ತಿದ್ದಾಗ ಈ ಸತ್ಯವನ್ನು ಕೇಳಿ ವಿಶ್ವದ ಮೂಲೆ ಮೂಲೆಗಳಿಂದ ಬಂದಿದ್ದ ಜನ ದಂಗು ಬಡಿದು ಹೋದರು. ಅವರಲ್ಲಿ ಭಾರತದ ಬಗ್ಗೆ ಇದ್ದ ಹುಸಿ ಕಲ್ಪನೆಗಳು ಕರಗತೊಡಗಿದವು. "ಮನುಷ್ಯ-ಮನುಷ್ಯರ ನಡುವೆ ಈ ಮಟ್ಟದ ಅಸಮಾನತೆ, ಅಮಾನುಷತೆ ಇರಲಿ ಸಾಧ್ಯವೇ? ಎನ್ನುವಂತೆ ಅವರ ಮುಖಗಳು ಪ್ರಶ್ನಾರ್ಥಕವಾಗಿ ಮಾರ್ಪಡುತ್ತಿದ್ದದ್ದು ಕಣ್ಣಿಗೆ ಕಾಣುವಂತಿತ್ತು" [6] ಎಂದು ಹೇಳುವಾಗ ತಾವು ದಕ್ಷಿಣ ಆಫ್ರಿಕಾಗೆ ಹೋದ ಉದ್ದೇಶ ಸಾರ್ಥಕ ಗೊಂಡಿದ್ದರ ಭಾವ ವ್ಯಕ್ತವಾಗುವುದರ ಜೊತೆಗೆ ಇದುವರೆಗೂ ಭಾರತದಲ್ಲಿ ಈ ರೀತಿಯ ಒಂದು ಸಮಸ್ಯೆ ಇದೆ ಎಂದೇ ತಿಳಿಯದಿದ್ದ ಜನರಿಗೆ ಇಂತ ಒಂದು ಸಮಸ್ಯೆ ಇದೆ ಎಂದು ಜನಜಾಹೀರುಗೊಳಿಸುತ್ತಾ ತಮ್ಮ ಮೊದಲ ಪ್ರಯತ್ನದಲ್ಲಿ ಸಫಲರಾದದ್ದು

---

5. -ಅದೇ -ಪುಟ 25

6.- ಅದೇ - ಪುಟ 28ರಿಂದ 39

ವ್ಯಕ್ತವಾಗಿದೆ. 'ಬಿಹಾರದಲ್ಲಿ ಭೂ ಮಾಲೀಕರು ದಲಿತ ಹೆಣ್ಣುಮಕ್ಕಳ ಮರ್ಮಾಂಗಕ್ಕೆ ಗುರಿ ಇಟ್ಟು ಶೂಟ್ ಮಾಡುತ್ತಾರೆ! ಭೂ ಮಾಲೀಕರಿಗೆ ಹೀಗೇಕೆ ಮಾಡುತ್ತೀರಿ ಅಂದರೆ ಅದು ದಲಿತರ ಜನ್ಮಸ್ಥಳ ಅಲ್ಲಿಗೆ ಶೂಟ್ ಮಾಡಿದರೆ ದಲಿತರ ಜನನ ನಿಯಂತ್ರಣವಾಗುತ್ತದೆ. ಎಂಬ ಪಾಳೇಗಾರಿಕೆಯ ಉತ್ತರ ಸಿಗುತ್ತದೆ. ಇಂತಹ ಭೂ ಮಾಲೀಕರಿಗೆ ಸರ್ಕಾರಗಳು ಪೋಲೀಸರು, ಜಾತಿವಂತರ ಮುಂತಾದವರ ಸಹಕಾರವಿರುತ್ತೆ, ಎಂಬ ಸತ್ಯಗಳನ್ನು ಘಟನಾವಳಿಗಳೊಂದಿಗೆ ಮಾರ್ಟಿನ್ ಮೆಕ್ವಾನ್ ವಿವರಿಸುತ್ತಿದ್ದರೆ ಇಡೀ ಸಭೆಯೇ ದಂಗು ಬಡಿದು ಹೋಗಿತ್ತು. ತಮ್ಮ ಊಹೆಗೂ ಮೀರಿದ ವಾಸ್ತವಗಳಿಗೆ ತೆರೆದುಕೊಂಡಿದ್ದರಿಂದ ಆಘಾತ ಗೊಂಡಿದ್ದರು! ಬೇರಾವ ದೇಶದವರೂ ಒಂದೇ ಒಂದು ಪ್ರಶ್ನೆಯು ಸೊಲ್ಲೆತ್ತದೆ ಸ್ತಂಭೀಭೂತರಾಗಿ ಕುಂತಲ್ಲೇ ಶಿಲೆಗಳಾಗಿದ್ದರು" [7] ಎಂದು ಹೇಳುತ್ತಾರೆ. ವಿಶ್ವದ ಬೇರೆಲ್ಲರೂ ಈ ಜಾತಿ ಸಮಸ್ಯೆಯಿಂದ ನಲುಗುತ್ತಿರುವ ಜನರ ನೋವಿಗೆ ಸ್ಪಂಧಿಸುತ್ತಿದ್ದರೆ, ನಮ್ಮ ಸರ್ಕಾರ ತಮ್ಮ ಏಜೆಂಟ್‌ಗಳ ಮೂಲಕ ವಿಶ್ವದ ಜನತೆಯ ಹಾದಿಯನ್ನು ತಪ್ಪಿಸುವ ಗೊಂದಲವನ್ನುಂಟು ಮಾಡುವ ಕೆಲಸವನ್ನು ಮಾಡುತ್ತಿತ್ತು. 'ಭಾರತದಲ್ಲಿ ಜಾತಿ ಪದ್ಧತಿಯೇ ಇಲ್ಲ, ಭಾರತದಲ್ಲಿರುವ ಪ್ರತಿಯೊಬ್ಬರೂ ಅಣ್ಣ ತಮ್ಮಂದಿರಂತೆ ಬದುಕುತ್ತಿದ್ದೇವೆ, ಎಲ್ಲಾ ದೇಶಗಳಲ್ಲಿದ್ದಂತೆ ಆಗೀಗ ಒಂದೆರಡು ಜಗಳ, ಮನಸ್ತಾಪ, ಮುನಿಸುಗಳು ಆಗಬಹುದಷ್ಟೇ ಹೊರತು ಮಾರ್ಟಿನ್ ಹೇಳುವಂತೆ ಜಾತಿಕಾರಣಕ್ಕಾಗಿ ಕೊಲೆ, ರಕ್ತಪಾತಗಳು ಆಗುವುದೇ ಇಲ್ಲ. ಇದು ಭಾರತದ ಆಂತರಿಕ ಸಮಸ್ಯೆ. ಭಾರತದಲ್ಲೇ ಹುಟ್ಟಿ ಬೆಳೆದ ನಾನು ಜಾತಿ ಕಾರಣಕ್ಕೆ ಭಾರತದಲ್ಲಿ ಕೊಲೆ, ಹಿಂಸೆ ಆಗಿದ್ದನ್ನು ಈವರೆಗೂ ಕಂಡೇ ಇಲ್ಲ' ಎಂಬ ವಾದವನ್ನು ಮಂಡಿಸುತ್ತಾ ನೆರೆದಿದ್ದ ಜನರ ಹಾದಿ ತಪ್ಪಿಸುವ ಪ್ರಯತ್ನವನ್ನು ಮಾಡುತ್ತಿದ್ದರು. ಅವರ ಪ್ರಯತ್ನವನ್ನು ಲೇಖಕರು "ಜಾತಿ ದ್ವೇಷದ ಕೆಂಡದುಂಡೆಗಳನ್ನು ತನ್ನ ಜರತಾರಿ ಕೇಸರಿ ವಸ್ತ್ರದಲ್ಲಿ ಸುತ್ತಿ ಮರೆ ಮಾಚಲು ಹೆಣಗಾಡಿದರು" ಎಂದು ಹೇಳಿ [8] ನಮ್ಮ ಬಲಪಂಥೀಯರ ಧೋರಣೆ ಎಂತದ್ದು ದಲಿತರ ಸಮಸ್ಯೆಯನ್ನು ಅರ್ಥಮಾಡಿಕೊಂಡು ನಿವಾರಣೆ ಮಾಡಲೂ ಪ್ರಯತ್ನಿಸದೇ ತಮ್ಮನ್ನು ತಾವು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾ ಇರುವುದನ್ನು ಕಂಡು ಲೇಖಕರು ಕೆಂಡಾಮಂಡಲರಾಗುತ್ತಾರೆ.

ಜೊತೆಗೆ ಸರ್ಕಾರದ ಏಜೆಂಟ್‌ಗಳ ಮಾತಿಗೆ ಲೇಖಕರು "ಇಲ್ಲಿ ಭಾರತದಲ್ಲಿನ ಒಂದು ಜೀವಂತ ಕ್ರೌರ್ಯದ ಬಗ್ಗೆ ಚರ್ಚೆಯಾಗುತ್ತಿದೆ. ಈ ಕ್ರೌರ್ಯಕ್ಕೆ ತುತ್ತಾದವರು ಬಂದು ಇಲ್ಲಿ ಮಾತನಾಡುತ್ತಿದ್ದಾರೆ. ಇಲ್ಲಿ ಪ್ರಶ್ನೆ ಮಾಡುವ ನೆಪದಲ್ಲಿ ಗೊಂದಲ ಗೊಳಿಸುತ್ತಿರುವವರು ಸರ್ಕಾರದ 'ಏಜೆಂಟರು! ದಿನವೊಂದಕ್ಕೆ ಒಬ್ಬ ವ್ಯಕ್ತಿಗೆ ಭಾರತ ಸರ್ಕಾರ ಸುಮಾರು ೬೦೦ ಡಾಲರ್‌ಗಳನ್ನು ಸಿಟ್ಟಿಂಗ್ ಚಾರ್ಜ್ ನೀಡಿ ಕಳಿಸಿದೆ!' ಭಾರತದಲ್ಲಿ ದಿನನಿತ್ಯ ನಡೆಯುವ ಜಾತಿ ದ್ವೇಷದ ಕ್ರೌರ್ಯ,

7. -ಅದೇ -ಪುಟ-36

8. -ಅದೇ- ಪುಟ - 39

ಈ ಕಾರಣಕ್ಕೆ ಹರಿವ ನೆತ್ತರು ಕಣ್ಣಿರುವ ಪ್ರತಿಯೊಬ್ಬನಿಗೂ ಕಾಣುವಂತಹದ್ದು, ಭಾರತದಲ್ಲಿ ಜಾತಿ ದ್ವೇಷದ ಕ್ರೌರ್ಯವನ್ನೇ ಕಂಡಿಲ್ಲ ಎಂದು ಇಲ್ಲಿ ವಾದಿಸುತ್ತಿರುವವರ ಪಂಚೇಂದ್ರಿಯಗಳನ್ನು ಸರ್ಕಾರ ಕೊಟ್ಟ ಹಣ ಬಂದ್ ಮಾಡಿದೆ ಅಥವಾ ಈ ಜನರ ಪಂಚೇಂದ್ರಿಯಗಳಲ್ಲೇ ಏನೋ ಊನವಿರಬೇಕು" [9]ಎಂದು ಬಹಳ ಖಾರವಾಗಿ ಪ್ರತಿಕ್ರಿಯಿಸುವುದು ಸಂದರ್ಭೋಚಿತವಾಗಿದೆ. ಅಷ್ಟೇ ಅಲ್ಲದೇ ಸಂವೇದನ ರಹಿತವಾದ ನಮ್ಮ ಸರ್ಕಾರದ ನಡವಳಿಕೆಗೆ ಸರಿಯಾದ ಪ್ರತಿಕ್ರಿಯೆಯನ್ನೇ ನೀಡಿದ್ದಾರೆ. ಸರ್ಕಾರ ಮುಂದೆ ನಿಂತು ಸರಿಪಡಿಸಬೇಕಾಗಿರುವ ಸಮಸ್ಯೆಯನ್ನು ಸರ್ಕಾರವೇ ಅಂತರಾಷ್ಟ್ರೀಯ ಮಟ್ಟದಲ್ಲಿ ಮುಚ್ಚು ಹಾಕುತ್ತಿರುವ ಪ್ರಯತ್ನವನ್ನು ತಮ್ಮ ಕಥನದಲ್ಲಿ ತೆರೆದಿಟ್ಟು ನಮ್ಮ ಸರ್ಕಾರ ಎಂತವರ ಸರ್ಕಾರ ಎಂಬುದನ್ನು ತೋರಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಹೀಗೆ 'ದಲಿತ ಇಷ್ಯೂ'ವಿನ ಬಗ್ಗೆ ವರ್ಣ ವಿರೋಧಿ ಸಮಾವೇಶದಲ್ಲಿ ವಿಶ್ವದ ಗಮನ ಸೆಳೆಯುವಲ್ಲಿ ಯಶಸ್ವಿಯಾದ ನಮ್ಮ ತಂಡ, ಈ ಇಷ್ಯೂವಿನ ಬಗ್ಗೆ ಕನಿಷ್ಠ ಜವಾಬ್ದಾರಿಯೂ ಇಲ್ಲದೆ ಹೇಗೆ ನಮ್ಮ ದಲಿತ ಎಂ.ಪಿಗಳು ವರ್ತಿಸಿದರು. ಇದರಿಂದ ಅನುಭವಿಸಿದ ಮುಖಭಂಗವನ್ನು, ಇಂಥ ಗಂಭೀರ ವಿಷಯದ ಬಗ್ಗೆ ಯಾವುದೇ ರೀತಿಯ ತಯಾರಿಯನ್ನು ನಡೆಸದ ಈ ಎಂ.ಪಿಗಳಿಗೆ ಅವರ ರಾಜಕೀಯ ವರ್ಚಸ್ಸು ಹಿನ್ನೆಲೆಗಳನ್ನು ನೋಡಿ ಈ ಇಷ್ಯೂವನ್ನು ಕೋರ್‌ಗ್ರೂಪ್ ಅವರ ಕೈಗಿತ್ತು ಕೈಸುಟ್ಟುಕೊಂಡಿತು ಎಂದು ಹೇಳುತ್ತಾ "ಪ್ರಕಾಶ್ ಅಂಬೇಡ್ಕರ್, ದಲಿತ ಏಳುಮಲೈ ಮತ್ತು ಪ್ರವೀಣ್ ರಾಷ್ಟ್ರಪಾಲ್ ಎಂಬ ನಮ್ಮ ದಲಿತ ಎಂಪಿಗಳು ನಾವು ಅತೀ ಎಚ್ಚರಿಕೆಯಿಂದ ಕಟ್ಟಿದ ಸೌಧಕ್ಕೆ ಆರ್.ಡಿ. ಎಕ್ಸ್ ಇಟ್ಟಿದ್ದರು!" [10] ಎಂದು ತಮಗಾದ ಆಘಾತವನ್ನು ತಿಳಿಸಿದ್ದಾರೆ. ಅಷ್ಟೇ ಅಲ್ಲದೆ "ಸಿಕ್ಕಸಿಕ್ಕವರಿಗೆಲ್ಲಾ ನಮ್ಮ ದೇಶದ ಜಾತಿಭೇದ, ದಲಿತರ ಮೇಲಿನ ದೌರ್ಜನ್ಯ, ಅಸ್ಪೃಶ್ಯತೆಗಳ ಬಗ್ಗೆ ವಿವರವಾಗಿ ಹೇಳಿ ಅವರ ಮನ ಮುಟ್ಟುತ್ತಿದ್ದೆವು. ನಮ್ಮ ವಿರುದ್ಧ ಬಂದ ಆರೆಸ್ಸೆಸ್ ಹಾಗೂ ಅವರ ಚೇಲಾಗಳಂತಿದ್ದ ರವಿಶಂಕರ್ ಮುಂತಾದವರಿಗೆ ಮಾತಿನಲ್ಲೇ ಮೂತಿಗೆ ಇಕ್ಕಿ ಕಳಿಸಿದ್ದೆವು. ನಮ್ಮ ವಿರೋಧಿಗಳೆನ್ನುವವರು ಅಲ್ಲಿ ಯಾರು ನಿಲ್ಲುತ್ತಿರಲಿಲ್ಲ. ಹೀಗಿರುವಾಗ ನಮ್ಮವರೇ ಬಂದು ನಮಗೆ ಮೂತಿಗೆ ಇಕ್ಕಿದಂತಹ ಅನುಭವವದು!" ಎಂದು ಹೇಳಿದ್ದಾರೆ. [11] ಇಲ್ಲಿ ದುರಂತವೆಂದರೆ ದಲಿತ ಇಷ್ಯೂವನ್ನು ದಲಿತನಾಯಕರೇ ಗಂಭೀರವಾಗಿ ಪರಿಗಣಿಸದೇ ಉಡಾಫೆಯಿಂದ ವರ್ತಿಸಿ ಇಷ್ಟು ದಿನಗಳ ಪ್ರಯತ್ನವನ್ನೆಲ್ಲಾ 'ಹೊಳೆಯಲ್ಲಿ ಹುಣಸೇ ಹಣ್ಣು ಹಿಂಡಿದಂತೆ' ವ್ಯರ್ಥಗೊಳಿಸಿದ್ದು, ಇಂತ ಜ್ವಲಂತ ಸಾಕ್ಷಿಗಳಿಂದಲೇ ನಾವು ತಿಳಿಯಬಹುದು ನಮ್ಮಲ್ಲಿ ಇನ್ನೂ ಏಕೆ ದಲಿತ ಸಮಸ್ಯೆ, ಜಾತಿ ಭೇದ, ದೌರ್ಜನ್ಯಗಳು ಜೀವಂತವಾಗಿ ಉಳಿದಿವೆ

---

9. -ಅದೇ -ಪುಟ 40

10. -ಅದೇ -ಪುಟ 65

11. -ಅದೇ -ಪುಟ 66

ಎಂದು. ಇದಕ್ಕೆ ಪೂರಕವಾಗಿ ದ್ವಾರಕಾನಾಥರು ಮತ್ತೊಂದು ಪ್ರಸಂಗವನ್ನು ನಮ್ಮ ಮುಂದಿಡುತ್ತಾರೆ. 'ಇಂಟರ್ ನ್ಯಾಷನಲ್ ಕಮ್ಯುನಿಟಿ ಸೆಂಟರ್‌ನಲ್ಲಿ ಸರ್ಕಾರಿ ಸಭೆ ನಡೆಯುವ ಕಾರ್ಯಕ್ರಮವಿತ್ತು. ಆದರೆ ಈ ಕಾರ್ಯಕ್ರಮಕ್ಕೆ ಅನುಮತಿ ಪತ್ರವಿಲ್ಲದೇ ಹೋಗುವಂತಿರಲಿಲ್ಲ. ಇಡೀ ತಂಡಕ್ಕೆ ಅನುಮತಿ ಪತ್ರ ದೊರೆಯದಿದ್ದ ಕಾರಣ ಒಬ್ಬೊಬ್ಬರಾಗಿ ಒಳಹೋಗಿ ಐದತ್ತು ನಿಮಿಷ ಇದ್ದು ಹೊರ ಬರುತ್ತಿದ್ದರು. ಲೇಖಕರು ಒಳ ಹೋದಾಗ ನೆಲ್ಸನ್ ಮಂಡೇಲಾರ ಭಾಷಣವನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿವಿಯಲ್ಲಿ ತೋರಿಸುತ್ತಿದ್ದರು. ಇಡೀ ಸಭಾಂಗಣ ಅದನ್ನು ವೀಕ್ಷಿಸುತ್ತಿತ್ತು. ರಾಮದಾಸ್ ಅಥವಾಲೆ ತಮಗೊಬ್ಬರಿಗೆ ಪ್ರತ್ಯೇಕವಾದ ಪಾಸ್ ಪಡೆದು ಅಲ್ಲಿ ನಡೆಯುತ್ತಿದ್ದ ಚರ್ಚೆಯನ್ನು ಅತಿಮುಖ್ಯವಾದ ಭಾಷಣವನ್ನು ವೀಕ್ಷಿಸದೆ ಚೇರ್‌ನಲ್ಲಿ ಕುಂತು ಸಣ್ಣಗೆ ಗೊರಕೆ ಹೊಡೆಯುತ್ತಿದ್ದರು. ಹೋಗಿ ಬರುವವರೆಲ್ಲಾ ಅವರನ್ನೇ ನೋಡಿಕೊಂಡು ಹೋಗುತ್ತಿದ್ದರು. ಆಗ ಲೇಖಕರು ಏನೋ ಮಾತನಾಡುವಂತೆ ಅವರನ್ನು ನಿದ್ರೆಯಿಂದ ಎಬ್ಬಿಸಿ ಹೊರಬಂದರು.[12] ಹೀಗೆ ಜವಾಬ್ದಾರಿಯುತವಾದ ಸ್ಥಾನದಲ್ಲಿರುವವರೇ ಹೇಗೆ ಬೇಜವಾಬ್ದಾರಿ ಯುತವಾಗಿ ವರ್ತಿಸಿದರು ಎಂದು ತಿಳಿಸುತ್ತಾರೆ. ಭಾರತದ ಪ್ರತಿನಿಧಿಗಳಾಗಿ ದಲಿತರ ನಾಯಕರರಾಗಿ ಬಂದಿದ್ದ ಮೂರ್ಖ ರಾಜಕಾರಣಿಗಳು ವಿಶ್ವಸಮುದಾಯದ ಅಂತ ಚಾರಿತ್ರಿಕ ನಿರ್ಣಾಕದ ಸ್ಥಿತಿಯಲ್ಲಿ ಅತ್ಯಂತ ಹೇಯವಾಗಿ ಅವಮಾನಕರವಾಗಿ ನಡೆದುಕೊಂಡು ಅಲ್ಲಿಗೆ ಅಷ್ಟೊಂದು ದೊಡ್ಡ ಉದ್ದೇಶದಿಂದ ಹೋಗಿದ್ದವರ ಗುರಿಯನ್ನೇ ಕೆಡಿಸಿದ್ದು ಮಾತ್ರ ನಮ್ಮ ದುರಂತ. ಇವರಿಗಿಂತ ಮೂಸಾದೇಸಾಯಿ ಎಂಬ ದಕ್ಷಿಣ ಆಫ್ರಿಕಾದ ಭಾರತೀಯನೇ ಎಷ್ಟೋ ಉತ್ತಮ ವೆನಿಸುತ್ತಾನೆ ಆತ ಕೇವಲ ಪೆಟ್ರೋಲ್ ವ್ಯಾಪಾರಿಯಾಗಿದ್ದರು. ನಮ್ಮ ದಲಿತ ಎಂ.ಪಿ.ಗಳಿಗಿಂತ ಹೆಚ್ಚು ಡರ್ಬಾನ್ ಸಮಾವೇಶದ ಬಗ್ಗೆ, ಭಾರತದಲ್ಲಿನ ಜಾತಿಭೇದಗಳ ಬಗ್ಗೆ ತಿಳುವಳಿಕೆ ಇದೆ. ಆತನೊಂದಿಗೆ ಗಂಟೆಗಟ್ಟಲೆ ಭಾರತ ಮತ್ತು ದಕ್ಷಿಣ ಆಫ್ರಿಕದ ಸಂಬಂಧಗಳ ಬಗ್ಗೆ ಇಂತ ಸಮಾವೇಶಗಳ ಬಗ್ಗೆ, ದಲಿತರ ಅಲ್ಪ ಸಂಖ್ಯಾತರ ಬಗ್ಗೆ ನಡೆಸಿದ ಚರ್ಚೆಗಳನ್ನು ಹೀಗೆ ದಾಖಲಿಸಿದ್ದಾರೆ 'ವರ್ಣ ಮತ್ತು ಜಾತಿ ಒಂದೇ ನಾಣ್ಯದ ಎರಡು ಮುಖಗಳೆಂದು ಹೇಳಿದ ಆತ ಇದ್ದಕ್ಕಿದ್ದಂತೆ ಕಡಲನ್ನು ತೋರಿಸಿ 'ಇದು ಇಂಡಿಯನ್ ಸೀ ಅಂದರೆ 'ಹಿಂದೂ ಮಹಾಸಾಗರ' ಭಾರತ ಮತ್ತು ದಕ್ಷಿಣ ಆಫ್ರಿಕಾ ನಡುವೆ ಈ ಕಡಲಿದೆ. ಈ ಎರಡೂ ದೇಶದೇಶಗಳಿಗೂ ಅನೇಕ ಸಾಮ್ಯಗಳಿವೆ. ಅಲ್ಲಿ ಜಾತಿ ಇದೆ, ಇಲ್ಲಿ ವರ್ಣವಿದೆ. ಎರಡೂ ದೇಶಗಳನ್ನು ಆಳಿದವರು ಬ್ರಿಟಿಷರೇ ಅಲ್ಲೊಬ್ಬ ಗಾಂಧಿ ಸ್ವಾತಂತ್ರ್ಯ ಕೊಡಿಸಿದ. ಇಲ್ಲಿ ನೆಲ್ಸನ್ ಮಂಡೇಲಾ ಸ್ವಾತಂತ್ರ್ಯ ಕೊಡಿಸಿದ ಎಂದು ಅವನಾಡಿದ ಮಾತುಗಳನ್ನು ತಿಳಿಸುತ್ತಾ "ಈತನ ಒಳನೋಟ ಇತಿಹಾಸ ಪ್ರಜ್ಞೆ, ರಾಜ ಕಾರಣ, ಆರ್ಥಿಕ, ಸಾಮಾಜಿಕ ನೀತಿಗಳ ತಿಳುವಳಿಕೆ ಕಂಡು ನಾವು ಮೂಕ ವಿಸ್ಮಿತರಾದೆವು"[13] ಎಂದು ಅವನಲ್ಲಿನ ತಿಳುವಳಿಕೆಯನ್ನು ಕಂಡು ಆಶ್ಚರ್ಯ ಪಡುತ್ತಾರೆ. "ದಕ್ಷಿಣ ಆಫ್ರಿಕಾದ

12. -ಅದೇ- ಪುಟ -67-68

13. -ಅದೇ-ಪುಟ -53ರಿಂದ 54

ಡರ್ಬಾನ್‌ನಲ್ಲಿ ಹಿಂದೂ ಮಹಾಸಾಗರದ ದಂಡೆಯ ಮೇಲೆ ನಮಗೆ ಮೂಸಾ ದೇಸಾಯಿ ಎಂಬ ಸಾಬಿಯಿಂದ ಜ್ಞಾನೋದಯವಾಗಿತ್ತು" ಎಂಬ ಲೇಖಕರ ಮಾತುಗಳು ನಿಜಕ್ಕೂ ಮಾರ್ಮಿಕವಾಗಿದೆ. ಇದು ನಿಜಕ್ಕೂ ಅತಿಶಯೋಕ್ತಿಯಲ್ಲವೆನಿಸುತ್ತದೆ. ಏಕೆಂದರೆ ಸಮಾವೇಶದಲ್ಲಿ ನಡೆಯುವ ಮುಂದಿನ ಘಟನೆಗಳು ಇದನ್ನು ಪುಷ್ಟೀಕರಿಸುತ್ತದೆ.

ಕೊನೆಗೆ ಸರ್ಕಾರೇತರ ಸಂಸ್ಥೆಗಳು ದಲಿತ ಇಷ್ಯೂವನ್ನು ವಿಶ್ವದಾಖಲಾತಿಯಲ್ಲಿ ಸೇರಿಸುವಂತೆ ಮಾಡಿದ ಎಲ್ಲಾ ಪ್ರಯತ್ನಗಳು ಭಾರತ ಸರ್ಕಾರದ ಬ್ಲಾಕ್ ಮೇಲ್ ತಂತ್ರದಿಂದ ಹೇಗೆ ಕೈಗೂಡಲಿಲ್ಲವೆಂದು ವಿವರಿಸುತ್ತಾ "ಅಂತಾರಾಷ್ಟ್ರೀಯ ಮಟ್ಟದ ಈ ಸಭೆಯಲ್ಲಿ ನೆಲ್ಸನ್ ಮಂಡೇಲಾ, ಕೋಫಿ ಅನ್ನಾನ್, ಮೇರಿರಾಬಿನ್‌ಸನ್, ಫಿಡಲ್‌ಕ್ಯಾಸ್ಟ್ರೋ ಥರದವರು ಭಾಗವಹಿಸುತ್ತಿದ್ದರೆ, ಭಾರತದಂತಹ ದೊಡ್ಡ ದೇಶದಿಂದ ಒಬ್ಬ ರಾಜ್ಯಮಟ್ಟದ ಮಂತ್ರಿ ಹಾಗೂ ಒಬ್ಬ ಎಂಪಿ ಬಂದಿದ್ದು ಡಿಜಿ, ಐಜಿಗಳ ಸಭೆಗೆ ಇಬ್ಬರು ಪೋಲೀಸ್ ಪೇದೆಗಳು ಬಂದಂತಿತ್ತು!" ಎಂದು ಹೋಲಿಸಿದ್ದಾರೆ. ಅಷ್ಟೇ ಅಲ್ಲದೇ ಭಾರತ ಸರ್ಕಾರವನ್ನು ಸಮರ್ಥಿಸಿಕೊಳ್ಳಲೂ ಅಡ್ವಾಣಿಯೋ, ಯಶವಂತ ಸಿನ್ಹನೋ ಅಥವಾ ಪ್ರಮೋದ್ ಮಹಾಜನ್ ಥರದವರು ಈ ಸಭೆಗೆ ಬರದೇ ಒಮರ್ ಅಬ್ದುಲ್ಲಾ ಹಾಗೂ ಬಂಗಾರು ಲಕ್ಷ್ಮಣ್ ತರದವರನ್ನು ಕಳುಹಿಸಲೂ ಭಾಜಪ ಸರ್ಕಾರದ ಹಿಂದಿರುವ ಕುತಂತ್ರವನ್ನು ಬಯಲಿಗೆಳೆಯುತ್ತಾರೆ. "ಒಬ್ಬ ದಲಿತ, ಮತ್ತೊಬ್ಬ ಮುಸ್ಲೀಮರನ್ನು ಕಳುಹಿಸಿ ಒಂದು ದಲಿತ್ ಇಷ್ಯೂವನ್ನು ಒಬ್ಬ ದಲಿತ ಮತ್ತು ಮುಸ್ಲೀಂನಿಂದ ಒಡೆಯಲು ಪ್ರಯತ್ನಿಸುವುದು ಭಾಜಪ ಕುತಂತ್ರ" ಎಂದಿದ್ದಾರೆ [14] ಈ ಸಭೆಯಲ್ಲಿ ಯಥಾಪ್ರಕಾರ ಸರ್ಕಾರವನ್ನು ಸಮರ್ಥಿಸಿಕೊಳ್ಳುವ ಹೇಳಿಕೆಯನ್ನು ಒಮರ್ ಅಬ್ದುಲ್ಲಾ ನೀಡಿದರೆ, ಬಂಗಾರು ಲಕ್ಷ್ಮಣ್ ತಲೆ ತಪ್ಪಿಸಿಕೊಂಡು ಓಡಾಡುತ್ತಿದ್ದರೆಂದು ಹೇಳುವುದರ ಮೂಲಕ ಅಲ್ಪಸಂಖ್ಯಾತರು, ದಲಿತರು ಪಕ್ಷ ಒಡ್ಡಿದ ಯಾವುದೋ ಆಸೆಗೆ ಬಲಿಯಾದಂತಿರುವುದನ್ನು ತೋರಿಸುವ ಪ್ರಯತ್ನವಿದಾಗಿದೆ.

ಸಮಾವೇಶದ ಮೊದಲ ದಿನ ಸಭೆಯನ್ನು ಉದ್ದೇಶಿಸಿ ಮಾತನಾಡಿದ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಉನ್ನತ ಆಯುಕ್ತೆ ಮೇರಿರಾಬಿನ್ ಸನ್ ಬಗ್ಗೆ ಪ್ರತಿಕ್ರಿಯಿಸುತ್ತಾ ಲೇಖಕರು "ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಉನ್ನತ ಆಯುಕ್ತೆ ಮೇರಿ ರಾಬಿನ್‌ಸನ್ ಬಿಳಿಯರು, ಆದರೂ ಕಪ್ಪು ಆತ್ಮಗಳ ನೋವನ್ನು ಬಲ್ಲಂತಹ ಹೃದಯವಂತ ಹೆಣ್ಣುಮಗಳು" ಎಂದಿದ್ದಾರೆ. ಅಂದರೆ ತುಳಿತಕ್ಕೆ ಒಳಗಾದವರ ಬಗ್ಗೆ ತುಳಿತಕ್ಕೆ ಒಳಗಾದವರೇ ಹೋರಾಡಬೇಕೆಂದೇನೂ ಇಲ್ಲ ಅವರ ನೋವು, ಕಷ್ಟ ಸಮಸ್ಯೆಗಳಿಗೆ ಮಿಡಿಯುವ ಮನಸ್ಸಿರುವವರು ಯಾರಾದರೂ ಸರಿಯೇ ಎಂಬುದನ್ನು ಅತಿ ಸೂಕ್ಷ್ಮವಾಗಿ ಈ ಮೇಲಿನ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾರೆ.

---

14. -ಅದೇ -ಪುಟ - 76ರಿಂದ 80

ನಮ್ಮಲ್ಲಿ ಹೇಗೆ ಜಾತಿಭೇದವು ಜೀವಂತವಾಗಿದೆಯೋ ಅದೇ ರೀತಿ ದಕ್ಷಿಣ ಆಫ್ರಿಕಾದಲ್ಲಿಯೂ ವರ್ಣಭೇದ ಪಳಿಯುಳಿಕೆಗಳು ಇನ್ನೂ ಉಳಿದಿರುವುದಕ್ಕೆ ಡರ್ಬಾನ್‌ನ ಬೀಚ್‌ನಲ್ಲಿ ತಾವು ಕಂಡ ದೃಶ್ಯವನ್ನು ಲೇಖಕರು ವಿವರಿಸುತ್ತಾರೆ. 'ನೀಗ್ರೋ ಒಬ್ಬ ಕುದುರೆಯಂತೆಯೇ ಸಿಂಗರಿಸಿಕೊಂಡಿದ್ದಾನೆ. ಅವನ ಬೆನ್ನ ಮೇಲೆ ಕಲಾತ್ಮಕವಾದ ಜೀನ್ ಅನ್ನು ಹೊದಿಸಲಾಗಿದೆ. ಹಿಂಭಾಗದಲ್ಲಿ ಕುದುರೆ ಬಾಲದಂತೆ ಅನೇಕ ಬಣ್ಣಗಳಲ್ಲಿ ಪೋನಿ ಟೈಲನ್ನೂ ಕಟ್ಟಲಾಗಿದೆ. ಮುಂದೆ ಮಾತ್ರ ತಲೆಯ ಮೇಲೆ ಎರಡು ಕೊಂಬುಗಳುಳ್ಳ ಕಿರೀಟ ಅವನ ಕೊರಳಲ್ಲಿ ಅನೇಕ ಬಗೆಯ ಗಂಟೆಗಳು ಗೆಜ್ಜೆಗಳು! ಆ ಕರಿಯ ಒಂದು ಗಾಡಿಯನ್ನು ಎಳೆಯುತ್ತಾ ಕುದುರೆಯಂತೆ ನೆಗೆಯುತ್ತಾ ಓಡುತ್ತಿದ್ದಾನೆ. ಆ ಗಾಡಿಯಲ್ಲಿ ಇಬ್ಬರು ಬಿಳಿಯ ದಂಪತಿಗಳು ಕುಳಿತ್ತಿದ್ದಾರೆ. ಕರಿಯನ ಗಾಡಿ ನಾಗಾಲೋಟದಲ್ಲಿ ಓಡುತ್ತಿವೆ. [15] ಇಲ್ಲಿ ದಲಿತ ಕವಿ ಸಿದ್ಧಲಿಂಗಯ್ಯ ಅವರ 'ಊರು ಕೇರಿ' ಆತ್ಮಕಥೆಯಲ್ಲಿ ಅವರ ತಂದೆಯನ್ನು ಹೇಗೆ ಜಮೀನ್ದಾರರು ಹಸುಗಳಂತೆ ನೊಗಕ್ಕೆ ಕಟ್ಟಿ ಜಮೀನನ್ನು ಉಳಲು ಬಳಸುತ್ತಿದ್ದರೆಂಬುದರ ಚಿತ್ರಣವಿದೆ. ಕರಿಯರನ್ನು  ಕುದುರೆಯಂತೆ ಬಳಸಿಕೊಂಡಿದ್ದನ್ನು ಓದಿದಾಗ ಈ ಘಟನೆಯ ನೆನಪಾಗುತ್ತದೆ. ಎಂಥ ಅಮಾನುಷವಾದ ದೃಶ್ಯವನ್ನು ಲೇಖಕರು ವಿವರಿಸಿದ್ದಾರೆ. ಕಪ್ಪು ಜನರು ಬಿಳಿಯ ಚರ್ಮವನ್ನು ಹೊಂದದ ಏಕೈಕ ಕಾರಣದಿಂದಾಗಿ ಅವರನ್ನು ಪ್ರಾಣಿಗಳಂತೆ ನಡೆಸಿಕೊಳ್ಳುವುದು, ಅದರಲ್ಲಿ ತಮ್ಮ ಮೋಜನ್ನು ಅನುಭವಿಸುವುದನ್ನು ಎಂತಹ ಕ್ರೂರವಾದ ಕೃತ್ಯವೆಂಬುದು ಈ ದೃಶ್ಯದ ಮೂಲಕ ಧ್ವನಿತಗೊಳಿಸಿದ್ದಾರೆ. ಅವರು ಹೇಳುತ್ತಾರೆ. "ಇದೀಗ ಡರ್ಬಾನ್ ನಗರದಲ್ಲಿ ಕೆಲವೇ ಇಂತಹ ಎಳೆಯುವ ರಿಕ್ಷಾಗಳಿದ್ದು ಇಂದಿಗೂ ಈ ರಿಕ್ಷಾಗಳನ್ನು ಕರಿಯರೇ ಎಳೆಯುತ್ತಿದ್ದು ಸವಾರಿ ಮಾಡುವವರು ಬಿಳಿಯರೇ ಆಗಿದ್ದಾರೆ. ಬಿಳಿಯರು ತಮ್ಮ ಸುಸಂಸ್ಕೃತಿಯ ಅವಶೇಷಗಳನ್ನು ಲಜ್ಜೆಯಿಲ್ಲದೆ ಇನ್ನೂ ಉಳಿಸಿಕೊಂಡಿದ್ದಾರೆ ಎಂಬಲ್ಲಿ ಬಿಳಿಯರು ಎಂತ ಸುಸಂಸ್ಕೃತ ನಾಗರೀಕರೆಂಬುದು ಗೋಚರಿಸುತ್ತದೆ.

ಅದೇ ಬೀಚಿನ ಬಳಿ ಪ್ರವಾಸಕ್ಕಾಗಿ ಬಂದಿದ್ದ ಮಕ್ಕಳನ್ನು ನೋಡುತ್ತಾ "ಅಚ್ಚ ಕಪ್ಪು ಮಕ್ಕಳೊಂದಿಗೆ ಅಷ್ಟೇ ಅಪ್ಪಟ ಬಿಳಿಯ ಮಕ್ಕಳು ಯಾವ ವರ್ಣಭೇದವೂ ಇಲ್ಲದೆ ಒಬ್ಬರ ಕೈ ಹಿಡಿದು ಒಬ್ಬೊಬ್ಬರು ನಗುತ್ತಾ ನೆಗೆಯುತ್ತಾ, ಕಿರುಚುತ್ತಾ ಬರುತ್ತಿದ್ದಾರೆ?" [16] ಎಂದಿದ್ದಾರೆ. ಮಕ್ಕಳಾಗಿದ್ದಾಗ ಇರದ ವರ್ಣ ಭೇದ ಬೆಳೆದು ದೊಡ್ಡವರಾದಾಗ ಮಾತ್ರ ನಮ್ಮಲ್ಲಿ ಗೋಚರಿಸುವುದೇಕೆ? ಅಥವ ಮಕ್ಕಳಿಗಿರುವ ತಿಳುವಳಿಕೆ ದೊಡ್ಡವರಿಗಿರುವುದಿಲ್ಲವೇ? ಹಾಗೂ ಮುಂದಿನ ತಲೆಮಾರಿಗೆ ಈ ಭೇದ ಅಳಿಸಿ ಹೋಗುವ ಕುರುಹಿನಂತೆ ಲೇಖಕರಿಗೆ ಅನಿಸಿದೆಯೇ! ಹಾಗಾಗಿ ಅವರು "ಕಪ್ಪು ಬಿಳುಪಿನ ಮಕ್ಕಳ ಅಂತಹ ಸಮ್ಮಿಶ್ರಣದ ದೃಶ್ಯವನ್ನು ನನ್ನ ಜೀವನದಲ್ಲಿ ಇನ್ನು ಕಾಣಲಾರೆನೇನೋ ಎಂಬಂತೆ ಕಣ್ಣ ತುಂಬ ನೋಡತೊಡಗಿದೆ, ಸಿಕ್ಕ ಸಿಕ್ಕ ಮಕ್ಕಳನ್ನು ಎಳೆ

---

15. -ಅದೇ -ಪುಟ -27ರಿಂದ 28

16. -ಅದೇ- ಪುಟ -28

ಎಳೆದುಕೊಂಡು ಅಪ್ಪಿಕೊಂಡೆ, ಮನಸ್ಸು ತುಂಬಿ ಮುತ್ತುಕೊಟ್ಟೆ" [17] ಎಂದು ಭಾವುಕರಾಗಿ ಹೇಳಿದ್ದರಲ್ಲಿ ಎಲ್ಲಾ ಭೇದಗಳು ಅಳಿದು ಸಮಾನತೆಯಿಂದ ಎಲ್ಲರೂ ಬದುಕಬೇಕೆಂಬ ಉತ್ಕಟವಾದ ಬಯಕೆ ವ್ಯಕ್ತವಾಗಿದೆ.

ಅಸ್ಪಶ್ಯತೆ ನಮ್ಮ ದೇಶದಲ್ಲಿ ಹಾಗೂ ದಕ್ಷಿಣ ಆಫ್ರಿಕಾದಲ್ಲಿ ಹೇಗೆ ಸಮಾನವಾಗಿ ಜಾರಿಯಲ್ಲಿದೆ ಎಂಬುದು 'ಬನ್ನಿ ಚಾ' ಎಂಬ ತಿನಿಸನ್ನು ತಿನ್ನುವಾಗ ಲೇಖಕರ ಗಮನಕ್ಕೆ ಬರುತ್ತದೆ. ಲೇಖಕರು 'ನಾಜ್ ಹಲಾಲ್ ಎಂಬ ಹೋಟೆಲ್‌ಗೆ ಹೋಗಿದ್ದಾಗ ಅರ್ಧಲೋಪ್ ಬ್ರೆಡ್‌ನಲ್ಲಿ ಒಳಗಿನ ಮೆದುವಾದ ಭಾಗವನ್ನೆಲ್ಲಾ ತೆಗೆದು ಅದೇ ತಟ್ಟೆಯಲ್ಲಿ ಪಕ್ಕಕ್ಕಿಟ್ಟು ಆ ಬ್ರೆಡ್‌ನ ತುಂಬ ಕೋಳಿ ಸಾರನ್ನು ತುಂಬಿ ಕೊಟ್ಟಿದ್ದರು. ಅದನ್ನು ಕಂಡಾಕ್ಷಣ ಲೇಖಕರಿಗೆ ನಮ್ಮ ಮುದ್ದೆ ಸಾರು ನೆನಪಾಗುತ್ತವೆ. ಕಾರಣ ಅವರ ಊರಿನಲ್ಲಿ ಮುದ್ದೆಯ ಮಧ್ಯಭಾಗಕ್ಕೆ ಬಾವಿ ತೋಡಿದಂತೆ ಹಳ್ಳ ಮಾಡಿ ಅದರ ತುಂಬ ಸಾರು ತುಂಬಿ ಮುದ್ದೆಯ ಹೊರ ಗೋಡೆಯನ್ನು ಮೆಲ್ಲಗೆ ಕೀಳುತ್ತಾ ಮುದ್ದೆಯ ಒಳಗಿರುವ ಸಾರಿನೊಂದಿಗೆ ಅದ್ದಿಕೊಂಡು ತಿನ್ನುವುದು ರೂಢಿ. ಈ ರೀತಿ ಇವರು ತಟ್ಟೆಯಲ್ಲೇ ಮುದ್ದೆಯ ಮಧ್ಯೆ ಸಾರಾಕಿಕೊಂಡು ತಿನ್ನುತ್ತಿದ್ದದ್ದು ಮೋಜಿಗೆ, ಆದರೆ ಅದನ್ನು ಕಲಿತದ್ದು ಯಾರಿಂದ? ಎಂದು ನೆನಪಿಸಿಕೊಳ್ಳುತ್ತಾರೆ. ಅದನ್ನು ಅವರು ತಮ್ಮ ಮನೆಯ ಜೀತದಾಳಾಗಿದ್ದ ದೊಡ್ಡ ವೆಂಕಟನಿಂದ ಕಲಿತದೆಂದು ಹೊಲೆಯ ಮಾದಿಗರಿಗೆ ತಟ್ಟೆ ತಂಬಿಗೆ ಕೊಡುತ್ತಿರಲಿಲ್ಲವಾದ್ದರಿಂದ ಅವರುಗಳು ಎಡಗೈಯಲ್ಲಿ ಮುದ್ದೆ ಹಿಡಿದು ಅದರ ಮಧ್ಯ ಹಳ್ಳ ಮಾಡಿಕೊಂಡು ಮುದ್ದೆಯ ಸುತ್ತಲೂ ಕಿತ್ತು ತಿನ್ನುತ್ತಾ ಒಂದು ತೊಟ್ಟು ಸಾರೂ ಹೊರ ಹೋಗದಂತೆ ಮುದ್ದೆ ತಿಂದು ಮುಗಿಸುತ್ತಿದ್ದುದನ್ನು ಅದೇ ರೀತಿ ಹಿಂದೆ ಕರಿಯರು ಬಿಳಿಯರ ಕಬ್ಬಿನ ತೋಟಗಳಲ್ಲಿ, ಬಿಳಿಯರ ಗಾಲ್ಫ್ ಕ್ಲಬ್‌ಗಳಲ್ಲಿ ಕೆಲಸ ಮಾಡುತ್ತಿದ್ದು ಅವರಿಗೆ ತಟ್ಟೆ ತಂಬಿಗೆಗಳನ್ನು ಕೊಡುತ್ತಿರಲಿಲ್ಲ. ಹಾಗಾಗಿ ಬ್ರೆಡ್‌ನ ನಡುವೆ ಸಾರು ಹಾಕಿಕೊಂಡು ಕರಿಯರು ಸಾರು ಚೆಲ್ಲದಂತೆ, ಯಾವ ತಟ್ಟೆಯ ಅಗತ್ಯವೂ ಇಲ್ಲದೇ ಊಟ ಮಾಡುತ್ತಿದ್ದರಂತೆ. ಇದು ಇಂದು ಡರ್ಬಾನ್ ವಿಭಾಗದ ಸ್ಟೈಲಾಗಿದೆ' [18]ಎಂದು ಹೇಳುತ್ತಾ ಜಾತಿಭೇದ ಹಾಗೂ ವರ್ಣ ಭೇದಗಳ ನಡುವೆ ಇರುವ ಸಾಮ್ಯತೆಯನ್ನು ಗುರುತಿಸಿದ್ದಾರೆ. ಅಷ್ಟೇ ಅಲ್ಲದೆ ತಮ್ಮ ಊರಿನ ಕೆಲಸದ ದೊಡ್ಡ ವೆಂಕಟನನ್ನು ತಮ್ಮೊಂದಿಗೆ ಹೊಂದಿಸಿಕೊಂಡು ನೆನೆಯುವುದು ಮನಸ್ಸಿಗೆ ತಟ್ಟುತ್ತದೆ.

ಡರ್ಬಾನಿನ ಮೂಲ ನಿವಾಸಿ ಜುಲ ಜನಾಂಗದ ಬಗ್ಗೆ, ಬಿಳಿಯರು ಅವರ ನೆಲಕ್ಕೆ ಕಾಲಿಟ್ಟು ಅವರೊಂದಿಗೆ ಕಾದಾಡಿದ ಬಗ್ಗೆ ಹಾಗೂ ಅವರ ಸಂಸ್ಕೃತಿಯ ಬಗ್ಗೆ ತಿಳಿಸುತ್ತಾ "ಬಿಳಿಯರ ಬಂದೂಕುಗಳ ವಿರುದ್ಧ ಬಿಲ್ಲು ಬಾಣಗಳನ್ನು ಹಿಡಿದು ಕಾದಾಡಿದ ಜುಲ ಜನಾಂಗದ ವೀರಗಾಥೆ ಯನ್ನು ವರ್ಣಿಸಲೂ ಈ ಜಗತ್ತಿನಲ್ಲಿನ ಕಾಗದ, ಶಾಯಿಗಳು ಸಾಲಲಾರವು!" ಎಂದಿದ್ದಾರೆ.

17. -ಅದೇ- ಪುಟ -79

18. -ಅದೇ- ಪುಟ 36 ರಿಂದ 37

ಜೊತೆಗೆ ಜುಲು ಜನಾಂಗದವರ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ತಿಳಿಸುತ್ತಾ "ಪ್ರತಿ ಮಡಿಕೆ ಕುಡಿಕೆಯು ವೈವಿಧ್ಯಮಯವಾಗಿ, ಸುಂದರವಾಗಿ ಕಾಣುತ್ತವೆ; ಮಿಕ್ಕಂತೆ ಅಲ್ಲಿನ ದೊಡ್ಡ ಬಾನಿಗಳು, ಹಂಡೆಗಳು ತಂಬಿಗೆಗಳನ್ನು ಕಂಡರೆ ನಮ್ಮ ಹಳ್ಳಿಗಳೇ ನೆನಪಾಗುತ್ತವೆ. ಒಟ್ಟಾರೆಯಾಗಿ ಜುಲು ಜನಾಂಗದ ಸಂಸ್ಕೃತಿಗೂ ನಮ್ಮ ದ್ರಾವಿಡ ಸಂಸ್ಕೃತಿಗೂ ನಡುವೆ ಎಲ್ಲಿಯದೋ ಒಂದು ರೀತಿಯ ಸಂಬಂಧ ಸೆಳೆತ ಹಾಗೂ ಏನೋ ಆಕರ್ಷಣೆಯಿದ್ದಂತೆ ಭಾಸವಾಗುತ್ತದೆ" ಎಂದು ಹೇಳುತ್ತಾ ಎರಡೂ ಸಂಸ್ಕೃತಿಗಳ ನಡುವೆ ಇರುವ ಹೋಲಿಕೆಯನ್ನು ಎತ್ತಿ ಹಿಡಿದಿದ್ದಾರೆ. ಅಷ್ಟೇ ಅಲ್ಲದೆ "ಜುಲು ಹಾಡುಗಳಲ್ಲಿ, ಅವರ ಕುಣಿತ ಭಾಷೆ, ಹಾವಭಾವಗಳಲ್ಲಿ ಎಂಥದ್ದೋ ಒಂದು ರೀತಿಯ ಪೋರ್ಸ್ ಇರುತ್ತಿತ್ತು. ಇದೇ ರೀತಿಯ ಪೋರ್ಸ್ ಅನ್ನು ಆಂಧ್ರದಿಂದ ಹಾಗೂ ತಮಿಳುನಾಡಿನಿಂದ ಬಂದಿದ್ದ ದಲಿತ ಸಾಂಸ್ಕೃತಿಕ ತಂಡಗಳಲ್ಲೂ ಕಾಣಬಹುದಾಗಿತ್ತು" ಎಂದು ಹೇಳುತ್ತಾರೆ. ಹೇಗೆ ದಲಿತರು ಹಾಗೂ ಕರಿಯರ ನೋವು ದೌರ್ಜನ್ಯಗಳನ್ನು ಕಾಣುತ್ತಾರೆಯೋ ಅದೇ ರೀತಿ ಅವರ ಹಾಗೂ ದ್ರಾವಿಡ ಸಂಸ್ಕೃತಿಗಳ ನಡುವೆ ಇರುವ ಸಾಮ್ಯತೆಯನ್ನು ತುಲನೆ ಮಾಡಿದ್ದಾರೆ.

ಹಾಗಾಗಿ ದ್ವಾರಕಾನಾಥರ ಗಾಂಧಿ ಮೆಟ್ಟಿದ ನಾಡಿನಲ್ಲಿ ಪ್ರವಾಸ ಕಥನವು ದಲಿತರ ಹಾಗೂ ಕಪ್ಪು ಜನರ ಸಮಸ್ಯೆಯ ಬಗೆಗೆ ತೌಲನಿಕ ಚಿಂತನೆ ನಡೆಸಿದ ಕೃತಿಯಾಗಿದೆ.

**5.2 ದಕ್ಷಿಣ ಆಫ್ರಿಕಾದ ಭಾರತೀಯರಲ್ಲಿನ ಭಾರತೀಯತೆ**

ದ್ವಾರಕಾನಾಥರು ದಕ್ಷಿಣ ಆಫ್ರಿಕಾದ ತಮ್ಮ ಪ್ರವಾಸದಲ್ಲಿ ಗಮನಿಸಿದ ಮತ್ತೊಂದು ವಿಷಯವೆಂದರೆ ದಕ್ಷಿಣ ಆಫ್ರಿಕಾದಲ್ಲಿ ನೆಲೆಸಿರುವ ಭಾರತೀಯರಲ್ಲಿರುವ ನಿಜವಾದ ಭಾರತೀಯತೆ, ಇವರು ತಮ್ಮ ನೆಲವನ್ನು ಬಿಟ್ಟು ಬೇರೊಂದು ನೆಲದಲ್ಲಿ ನೆಲೆಸಿ ಜಾತಿ, ಧರ್ಮ, ಭಾಷೆಗಳ ಎಲ್ಲೆಯನ್ನು ಮೀರಿ ಬೆಳೆದಿರುವುದು. ಇಲ್ಲಿರುವ ಕೋಮು ಸೌಹಾರ್ದ ಭಾರತೀಯ ನೆಲದಲ್ಲಿಯೇ ಕಾಣಲು ಸಿಗುವುದಿಲ್ಲ. ಅಂತ ವಿಷಯಗಳನ್ನು ತಮ್ಮ ಪ್ರವಾಸ ಕಥನದ ಉದ್ದಕ್ಕೂ ಹೇಳುತ್ತಾ ಹೋಗಿದ್ದಾರೆ.

ಡರ್ಬಾನ್‌ನ ಬೀಚಿನಲ್ಲಿ ಹಕೀಂ ಎಂಬುವನ ಪರಿಚಯ ಲೇಖಕರಿಗಾಗುತ್ತದೆ. ಹಕೀಂನ ಪ್ರಕಾರ ಭಾರತದಲ್ಲಿ ಜಾತಿಭೇದ, ಮತಭೇದ ಯಾವುದು ಇಲ್ಲ. ಆದರೆ ಅದು ಇಂದಿಗೂ ರೂಢಿ ಯಲ್ಲಿದೆ ಎಂದು ತಿಳಿದು ಆಘಾತಕ್ಕೊಳಗಾಗುತ್ತಾನೆ. ಆತ ಡರ್ಬಾನ್‌ನಲ್ಲಿ ನಡೆದ ಒಂದು ಘಟನೆ ಯನ್ನು ಹೇಳುತ್ತಾನೆ. 'ಭಾರತದಲ್ಲಿ ಬಾಬ್ರಿ ಮಸೀದಿ ಒಡೆದ ಸಂದರ್ಭದಲ್ಲಿ ಅಲ್ಲಿದ್ದ ಶಿವಾಲಯವನ್ನು ಯಾರೋ ಕಿಡಿಗೇಡಿಗಳು ಒಡೆದು ಹಾಕಿದ್ದರಂತೆ. ಆ ಏರಿಯಾದ ಮುಸಲ್ಮಾನರೆಲ್ಲಾ ಸೇರಿ ಒಂದು ತೀರ್ಮಾನಕ್ಕೆ ಬಂದರು. ತಮ್ಮ ಬಂಧುಗಳಾದ ಹಿಂದುಗಳಿಗೆ ಮುಸಲ್ಮಾನರೆಲ್ಲಾ ಸೇರಿ ದೇವಾಲಯ, ಕಟ್ಟಿಸಿ ಕೊಡುವವರೆಗೂ ತಾವುಗಳು ಪ್ರಾರ್ಥನೆಗೆ ಹೋಗುವುದು ಬೇಡ. ಹಿಂದುಗಳಿಗೆ ದೇವಾಲಯ ಕಟ್ಟಿಸಿಕೊಟ್ಟ ನಂತರವಷ್ಟೇ ಮುಸಲ್ಮಾನರು ಮಸೀದಿಗೆ ಹೋದರಂತೆ' [1]

---

1. -ಅದೇ -ಪುಟ -32 ರಿಂದ 33

ಇದನ್ನು ಕೇಳಿದಾಕ್ಷಣ ಲೇಖಕರು "ಇದನ್ನು ಭಾರತದಲ್ಲಿ ಕಲ್ಪಿಸಿಕೊಳ್ಳಲು ಸಾಧ್ಯವೇ? ಹಾಗೇನಾದರೂ ಮುಸಲ್ಮಾನರು ಇಂತಹ ಸಾಹಸಕ್ಕೆ ಕೈ ಹಾಕಿದರೂ ನಮ್ಮ ಚೆಡ್ಡಿಗಳು ಅವರನ್ನು ಸುಮ್ಮನೆ ಬಿಡುತ್ತಾರೆಯೇ ಅಥವಾ ಮುಸಲ್ಮಾನರಲ್ಲಿನ ಮತೀಯವಾದಿಗಳು ಮುಸಲ್ಮಾನರಿಗೆ ಇಂತಹ ಕೆಲಸ ಮಾಡಲು ಪ್ರೋತ್ಸಾಹಿಸುತ್ತಾರೆಯೇ?'' ಎಂದು ದಕ್ಷಿಣ ಆಫ್ರಿಕಾದ ಭಾರತೀಯರಿಗೂ ತಮ್ಮ ನೆಲ್ಲದಲ್ಲೇ ಇರುವ ಭಾರತೀಯರಿಗೂ ಇರುವ ವ್ಯತ್ಯಾಸವನ್ನು ತಿಳಿಸುತ್ತಾರೆ.

'ಹಕೀಂ ಮುಸಲ್ಮಾನನಾದರೂ ಆತ ಮದುವೆಯಾಗಿರುವುದು ಹಿಂದು ಮರಾಠಿ ಹುಡುಗಿಯನ್ನು ಆತ ಮಸೀದಿಗೆ ಹೋದರೆ, ಆಕೆ ದೇವಸ್ಥಾನಕ್ಕೆ ಹೋಗಿ ಬರುತ್ತಾಳೆ. ಅವರಿಗೆ ನಾಲ್ಕು ವರ್ಷದ ಮಗನಿದ್ದಾನೆ. ಆ ಮಗುವಿನ ಮೇಲೆ ತಮ್ಮ ಧರ್ಮಗಳ ಪ್ರಭಾವ ಬೀರದಂತೆ ನೋಡಿಕೊಳ್ಳುತ್ತಿದ್ದಾರೆ. ಆತನಿಗೆ ಬುದ್ಧಿ ಬಂದಾಗ ತನಗಿಷ್ಟವಾದ ಧರ್ಮವನ್ನು ಆರಿಸಿಕೊಳ್ಳಲೂ ಸ್ವತಂತ್ರ [2] ಎಂದು ಹೇಳುತ್ತಾನೆ. ಇದು ಬರೀ ಡರ್ಬಾನ್‌ನಲ್ಲಿ ಮಾತ್ರವಲ್ಲ "ಇಡೀ ದಕ್ಷಿಣ ಆಫ್ರಿಕಾದ ಭಾರತೀಯರಲ್ಲಿ ಜಾತಿ ಭೇದಗಳಿಲ್ಲ, ಮತಭೇದಗಳಿಲ್ಲ ಯಾವುದೇ ಮತದವರು ಮತ್ಯಾವುದೇ ಮತದವರನ್ನು ಮದುವೆಯಾಗಬಹುದು. ಭಾರತೀಯರೆಲ್ಲರ ಕುಲ ಒಂದೇ, ಅವರಲ್ಲಿ ಯಾವುದೇ ರೀತಿಯ ತಾರತಮ್ಯಗಳಿಲ್ಲ''ವೆಂದು ಹೇಳುತ್ತಾರೆ. ಲೇಖಕರು, ಜಾತ್ಯಾತೀತ, ಧರ್ಮಾತೀತರಾಗಿ ನಿಜವಾದ ಭಾರತೀಯತೆಯನ್ನು ಅಲ್ಲಿನ ಭಾರತೀಯರು ಮೆರೆಯುತ್ತಿರುವುದರೆಡೆಗೆ ಬೆಳಕು ಚೆಲ್ಲಿದ್ದಾರೆ. ಇಂತ ಸಾಮರಸ್ಯ ನಮ್ಮಲ್ಲಿ ಏಕೆ ಸಾಧ್ಯವಾಗಿಲ್ಲ? ಇಂತ ವಿಶಾಲ ಮನೋಧರ್ಮ ಬರಬೇಕಾದರೆ ಇನ್ನು ಎಷ್ಟು ಶತಮಾನಗಳು ಕಾಯಬೇಕೋ ಎಂದು ನಮ್ಮನ್ನು ನಾವು ಆತ್ಮಾವಲೋಕಿಸಿಕೊಳ್ಳುವಂತೆ ಈ ಪ್ರಸಂಗವು ಮಾಡಿದೆ.

**5.3 ಅಂದು ಶೋಷಿತರು ಇಂದು ಶೋಷಕರು**

'ಹದಿನೇಳನೆ ಶತಮಾನದಲ್ಲಿ ಬಹುತೇಕ ಭಾರತೀಯರು ಡರ್ಬಾನ್‌ಗೆ ಬಂದು ನೆಲೆಸಿದರು. ಎರಡೂ ದೇಶವನ್ನು ಆಳುತ್ತಿದ್ದವರು ಬ್ರಿಟೀಷ್‌ರಾಗಿದ್ದರಿಂದ ದಕ್ಷಿಣ ಆಫ್ರಿಕಾದಲ್ಲಿ ಕಬ್ಬು ಬೆಳೆಯನ್ನು ಬೆಳೆಯಲು ಪರಿಣಿತರಾಗಿದ್ದ ಭಾರತೀಯರನ್ನು ಕರೆದುಕೊಂಡು ಬಂದರು. ಅಂದು ದೇಶ ಬಿಟ್ಟು ಬಂದ ಭಾರತೀಯರು ಸಾಕಷ್ಟು ಕಷ್ಟಗಳನ್ನು ಎದುರಿಸಬೇಕಾಯಿತು. ಈ ಕಬ್ಬು ಕೂಲಿಗಳಿಗೆ ತಲೆಯ ಮೇಲೊಂದು ಸೂರಿರಲಿಲ್ಲ. ಬಿಸಿಲಿಗೆ ಬಳಲುತ್ತಾ, ಚಳಿಯಲ್ಲಿ ಮಿಂಯುತ್ತಾ ಕಬ್ಬಿನ ಗದ್ದೆ ಬಯಲುಗಳಲ್ಲಿ ಇವರು ವಾಸಿಸಬೇಕಿತ್ತು. ಈ ಕೂಲಿಗಳನ್ನು ಕರೆತಂದ ಬಿಳಿಯರು ಈ ಭಾರತೀಯರನ್ನು ಕೂಡ ನೀಗ್ರೋಗಳಿಗಿಂತಲೂ ಕಡೆಯಾಗಿ, ಅಮಾನುಷವಾಗಿ ನೋಡಿಕೊಂಡರು. ಅನೇಕ ಭಾರತೀಯರಿಗೆ ಇಲ್ಲಿನ ವಾತಾವರಣ, ಊಟ ಒಗ್ಗದೆ

---

2. -ಅದೇ -ಪುಟ -32 ರಿಂದ 33

ಖಾಯಿಲೆಯಿಂದ ನರಳುತ್ತಿದ್ದರೂ ಔಷಧಿಯ ನೆರವು ಸಿಗುತ್ತಿರಲಿಲ್ಲ. ಹೀಗಾಗಿ ಅನೇಕ ಜನ ಅಸುನೀಗಿದರು. ಎಲ್ಲಾ ಕಷ್ಟಗಳನ್ನು ಉಂಡು ಉಳಿದವರು ಇಂದು ದಕ್ಷಿಣ ಆಫ್ರಿಕಾದ ಭಾರತೀಯರಾಗಿದ್ದಾರೆಂದು [1] ಅಂದು ಶೋಷಣೆಗೆ ಒಳಗಾಗಿದ್ದ ಭಾರತೀಯರ ಚಿತ್ರಣವನ್ನು ಮುಂದಿಡುತ್ತಾರೆ. 'ಅಂದು ಕೂಲಿಗಳಾಗಿ ಬಂದವರ ಮೊಮ್ಮಕ್ಕಳು, ಮರಿ ಮಕ್ಕಳು ಅಥವಾ ಅವರ ಸಂತಾನದವರು ಇಂದು ಕೂಲಿಗಳಾಗಿ ಉಳಿದಿಲ್ಲ! ಡರ್ಬಾನಿನ ಬಹುತೇಕ ಮೇಲ್ವರ್ಗಕ್ಕೆ ಸೇರಿಬಿಟ್ಟಿದ್ದಾರೆ, ಗುಜರಾತಿಗಳು ವಜ್ರ ವ್ಯಾಪಾರಿಗಳಾಗಿದ್ದರೆ, ಆಂಧ್ರದ ನಾಯ್ಡುಗಳು ವ್ಯಾಪಾರದೊಂದಿಗೆ ದಕ್ಷಿಣ ಆಫ್ರಿಕಾದ ಸರ್ಕಾರದಲ್ಲಿ ನೌಕರರಾಗಿ ರಾಜಕಾರಣದಲ್ಲೂ ಸಕ್ರಿಯರಾಗಿದ್ದಾರೆ. ಇನ್ನು ತಮಿಳುನಾಡಿನವರು ದಕ್ಷಿಣ ಆಫ್ರಿಕಾದ ಪೋಲೀಸ್ ಮತ್ತಿತರ ಕೆಲಸದೊಂದಿಗೆ ಖಾಸಗಿ ವೃತ್ತಿಗಳಲ್ಲಿ ತೊಡಗಿದ್ದಾರೆಂದು [2] ಬದಲಾದ ಕಾಲಮಾನದಲ್ಲಿ ಬದಲಾದ ಭಾರತೀಯರ ಸ್ಥಿತಿಯನ್ನು ಚಿತ್ರಿಸುತ್ತಾ ಈ ರೀತಿ ಅಂದು ಶೋಷಣೆಗೆ ಒಳಗಾದ ಭಾರತೀಯರು ತಾವೇ ಶೋಷಕರಾಗಿರುವುದಕ್ಕೆ ಖೇದವನ್ನು ವ್ಯಕ್ತ ಪಡಿಸುತ್ತಾರೆ. 'ಪೋಲೀಸ್ ಅಧಿಕಾರಿ ವಸಂತ ದಕ್ಷಿಣ ಆಫ್ರಿಕಾಗೆ ಸ್ವಾತಂತ್ರ್ಯ ಬಂದ ನಂತರ ಭಾರತೀಯರ ವಿರುದ್ಧ ಕರಿಯರು ಭೇದಭಾವ ಮಾಡುತ್ತಿದ್ದಾರೆಂದು ಆಕೆ ಭಾರತೀಯಳೆಂಬ ಕಾರಣಕ್ಕೆ ಆಕೆಗೆ ಇನ್ನೂ ಬಡ್ತಿ ಸಿಗುತ್ತಿಲ್ಲವೆಂದು ಬೇಸರಿಸಿದಾಗ ಲೇಖಕರು 'ಯಾವುದೇ ದೇಶದಲ್ಲೂ ಆ ದೇಶೀಯರನ್ನು ಬಿಟ್ಟು ಬೇರೆಯವರು ಅವರ ಅವಕಾಶಗಳನ್ನು ಕಬಳಿಸಿದರೆ ಆ ದೇಶಿಯರಿಗೆ ಅಸಹನೆಯಾಗುವುದು ಸಹಜ' ಎಂದು ಅವರನ್ನು ಸಮಾಧಾನ ಪಡಿಸಲೂ ಪ್ರಯತ್ನಿಸಿದರು, ವಸಂತರವರಿಗೆ ಅಲ್ಲಿನ ಕರಿಯರ ಬಗ್ಗೆ ತೀರ ಅಸಹನೆಯಿದ್ದಂತೆ ಕಂಡು ಬಂತು ಎಂದು ಹೇಳುತ್ತಾ "ಅಲ್ಲಿನ ಮೂಲ ನಿವಾಸಿಗಳಾದ ಕರಿಯಲು ತಮ್ಮ ನೆಲದಲ್ಲೇ ನಿರ್ಗತಿಕರಾಗಿ ಬೇರೆ ದೇಶಗಳಿಂದ ಬಂದ ಬ್ರಿಟೀಷರು, ಬರ್ಮಾದವರು ಮತ್ತು ಭಾರತೀಯರ ಬಳಿ ಕೂಲಿಗಳಾಗಿ ಇಂದಿಗೂ ನರಳುತ್ತಿರುವ ದೃಶ್ಯ ವಸಂತ ರವರಿಗೆ ಸಹಜವೆನ್ನಿಸುವಂತಿತ್ತು! ದಕ್ಷಿಣ ಆಫ್ರಿಕಾದ ಕರಿಯರಷ್ಟೇ ಕಪ್ಪಗಿರುವ, ಭಾರತದ ಮುಖ ಚಹರೆಯಿರುವ ವಸಂತರವರ ಒಳಗೆ ಬಿಳಿಯರ ಕ್ರೂರ ಮನಸ್ಸಿದ್ದಂತಿತ್ತು" ಎಂದು ಹೇಳುತ್ತಾ ಕರಿಯರಿಗಾಗಿ ಅವರ ಮನ ಮಿಡಿಯುತ್ತದೆ ಅದರ ಜೊತೆಗೆ ಒಂದು ಕಾಲದಲ್ಲಿ ಶೋಷಿತರಾದ ಭಾರತೀಯರು ಇಂದಿಗೂ ಶೋಷಣೆಗೆ ಒಳಗಾಗಿರುವ ಕರಿಯರಿಗೆ ಸ್ಪಂದಿಸದೆ ಈ ರೀತಿ ಶೋಷಕರಾಗಿರುವುದು ಬಹಳ ದುಃಖಕರವಾದ ಸಂಗತಿ ಎಂಬುದನ್ನು ತೋರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇಲ್ಲಿ ಮುನೀರಾ ಸಲೀಖ್‌ರ ಹೋಟೆಲ್‌ನಲ್ಲಿ ಕ್ಲೀನಿಂಗ್ ಕೆಲಸ ಮಾಡುವ ನೀಗ್ರೋ ಕೂಲಿ ಆಳು ಜೂನ್‌ಳ ಕಡೆಗೆ ದ್ವಾರಕಾನಾಥ್ ಸೂಕ್ಷ್ಮವಾಗಿ ಸ್ಪಂದಿಸಿದ್ದಾರೆ. 'ದಕ್ಷಿಣ ಆಫ್ರಿಕದ ಮೂಲ ನಿವಾಸಿಗಳಾದ, ಬಹುಸಂಖ್ಯಾತರಾದ ಕರಿಯರಿಗೆ ತಮ್ಮದೇ ನೆಲದಲ್ಲಿ ತಮ್ಮದೇ ಭೂಮಿಯಲ್ಲಿ ಅವರಿಗೆ ದೊರೆತಿರುವ ಭೂಮಿ ಕೇವಲ 7.3ರಷ್ಟು. ಬಿಳಿಯರು ಅಗಾಧವಾದ

---

1. -ಅದೇ -ಪುಟ -59

2. -ಅದೇ -ಪುಟ- 59

ಭೂಮಿಯನ್ನು ಹೊಂದಿದ್ದು ಅವರ ಭೂಮಿಯಲ್ಲಿ ಬಿತ್ತಿ ಬೆಳೆವವರು ಮಾತ್ರ ಕರಿಯರು. ಅವರ ಕಷ್ಟದ ಫಲವನ್ನು ಕುಂತು ಉಣ್ಣುವವರು ಮಾತ್ರ ಬಿಳಿಯರು. ಇಂದಿಗೂ ದಕ್ಷಿಣ ಆಫ್ರಿಕಾದ ಕರಿಯರ ಆದಾಯ, ಬದುಕುವ ಪರಿಸರ ಆರೋಗ್ಯ ಎಲ್ಲವೂ ಬಿಳಿಯರೊಂದಿಗೆ ಹೋಲಿಸಿದರೆ ಕಲ್ಪಿಸಿಕೊಳ್ಳಲಾರದಷ್ಟು ವ್ಯತ್ಯಾಸವಿದೆ [3] ಎಂದು ಲೇಖಕರು ಹೇಳುತ್ತಾರೆ. ಅಷ್ಟೇಕೆ "ಅಲ್ಲಿನ ಭಾರತೀಯರು ಮತ್ತು ಕರಿಯರ ನಡುವೆಯಿರುವ ಆರ್ಥಿಕ ಸ್ಥಿತಿಗತಿಗಳ ಅಂತರವೇ ಮುಗಿಲು ಭೂಮಿಯಷ್ಟಿದೆ. ನಮಗೆ ಕಣ್ಣಿಗೆ ಕಾಣುವಂತೆ ಇಲ್ಲಿನ ಕರಿಯರು ಇಂದಿಗೂ ತಮ್ಮ ನೆಲದಲ್ಲಿ ಕೂಲಿಗಳಾಗಿದ್ದರೆ, ದಕ್ಷಿಣ ಆಫ್ರಿಕಾಗೆ ಕೂಲಿಗಾಗಿ ಹೋದ ಭಾರತೀಯರು ಅಲ್ಲಿನ ವ್ಯಾಪಾರಿಗಳಾಗಿದ್ದಾರೆ! ಇಂದು ಕೂಡ ಕರಿಯರು ಬಡತನ, ದಾರಿದ್ರ್ಯತೆಗಳಲ್ಲಿ ಬದುಕುತ್ತಿರಬಹುದು" ಎಂದಿದ್ದಾರೆ. ಬಿಳಿಯರೊಂದಿಗೆ ನಮ್ಮ ಭಾರತೀಯರು ಶೋಷಕರಾಗಿರುವುದು ನಿಜಕ್ಕೂ ಬೇಸರದ ಸಂಗತಿ. ತಾವು ಒಂದು ಕಾಲದಲ್ಲಿ ಶೋಷಿತರಾಗಿದ್ದು, ಶೋಷಿತರ ನೋವಿನ ಅರಿವಿದ್ದು, ಶೋಷಣೆಗೆ ಒಳಗಾಗಿರುವ ಕರಿಯರ ನೋವಿಗೆ ಸ್ಪಂದಿಸದೆ ಬಿಳಿಯರಂತೆ ವರ್ತಿಸುತ್ತಿರುವುದು ನಿಜಕ್ಕೂ ದುಃಖಕರವಾದ ವಿಚಾರ. ಹಾಗಾಗಿ ಲೇಖಕರ ಮನಸ್ಸು ಈ ಎಲ್ಲಾ ಘಟನೆಗಳನ್ನು ನೋಡಿ ಮಿಡಿಯುತ್ತದೆ. ಇಲ್ಲಿ ದೇಶೀಯತೆಗಿಂತ ಮಾನವೀಯತೆ ಮುಖ್ಯವೆನಿಸಿದೆ.

---

3.- ಅದೇ- ಪುಟ- 48 ರಿಂದ 50

## 6. ಅಮೆರಿಕಾ ಆ ಮುಖ ಒಂದು ವಿಶ್ಲೇಷಣೆ

ಡಾ. ಸಿ.ಎಸ್. ದ್ವಾರಕಾನಾಥ್‌ರವರು ಅಕ್ಕ ಸಮ್ಮೇಳನದ ಸಲುವಾಗಿ ಅಮೆರಿಕಾಗೆ ಹೋಗಿದ್ದರು. ಅಲ್ಲಿ ಅನೇಕ ನಗರಗಳು, ಸ್ಮಾರಕ, ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡಿ ಅದರಿಂದ ಗಳಿಸಿದ ಅನುಭವವು 'ಅಮೆರಿಕಾ ಆ ಮುಖ' ಕೃತಿಯ ಮೂಲಕ ಹೊರಬಂದಿದೆ. ಕನ್ನಡದಲ್ಲಿ ಇದುವರೆಗೂ ಸುಮಾರು ನೂರೈವತ್ತಕ್ಕಿಂತಲೂ ಹೆಚ್ಚು ಅಮೆರಿಕಾ ಕುರಿತ ಪ್ರವಾಸ ಕಥನಗಳು ಬಂದಿವೆ. ನಮ್ಮಲ್ಲಿ ಅನೇಕ ಕಾರಣಗಳಿಗಾಗಿ ಅಮೆರಿಕಾಕ್ಕೆ ಹೋಗುವವರ ಸಂಖ್ಯೆ ಹೆಚ್ಚು. ಜೊತೆಗೆ ಅಮೆರಿಕಾ ಪ್ರವಾಸ ಮಾಡುವುದು ಒಂದು ರೀತಿಯಲ್ಲಿ ಪ್ರತಿಷ್ಠೆಯ ವಿಷಯ ಹೀಗೆ ಪ್ರವಾಸ ಮಾಡಿಬಂದವರಲ್ಲಿ ಕೆಲವರಾದರೂ ಆ ದೇಶದಲ್ಲಾದ ಅನುಭವಗಳಿಗೆ ಸಾಹಿತ್ಯ ರೂಪವನ್ನು ನೀಡಿದ್ದಾರೆ. ಒಂದೇ ದೇಶದ ಬಗ್ಗೆ ಅನೇಕ ಪ್ರವಾಸ ಕಥನಗಳು ಹೊರಬಂದಿದ್ದರೂ ಒಂದಕ್ಕಿಂತ ಒಂದು ಭಿನ್ನವಾಗಿದೆಯಾದರೂ ಎಲ್ಲಾ ಪ್ರವಾಸ ಕಥನಗಳಲ್ಲಿಯೂ ಅಮೆರಿಕಾದ ಗಗನಚುಂಬಿ ಭವನ, ಆ ದೇಶದ ಶ್ರೀಮಂತಿಕೆ, ಅರ್ಥವ್ಯವಸ್ಥೆ, ಸಮಾಜ ವ್ಯವಸ್ಥೆ, ರಸ್ತೆ, ಪ್ರಕೃತಿ ಸೌಂದರ್ಯ, ಜನಜೀವನ ಇತ್ಯಾದಿಗಳ ವಿವರಗಳನ್ನು ಹೊಂದಿರುತ್ತದೆ.

ಆದರೆ ದ್ವಾರಕಾನಾಥರು ರಾಜ್ಯ ಹಿಂದುಳಿದ ಆಯೋಗದ ಅಧ್ಯಕ್ಷರಾಗಿ, ದೌರ್ಜನ್ಯಕ್ಕೆ ಒಳಗಾಗಿದ್ದ ದಲಿತರ ನೋವುಗಳನ್ನು ಅರ್ಥೈಸಿಕೊಂಡಿದ್ದರಿಂದ, ದಲಿತರ ಹೋರಾಟ ಹಾಗೂ ಕರಿಯರ ಹೋರಾಟದ ನಡುವೆ ಸಾಮ್ಯತೆ ಇದ್ದುದ್ದರಿಂದ ಅಮೆರಿಕಾದ ಪ್ರವಾಸದಲ್ಲಿಯೂ ವರ್ಣಭೇದದ ಇತಿಹಾಸ ಹಾಗೂ ಕರಿಯರ ಹೋರಾಟದ ಹಿನ್ನಲೆಯ ಜಾಡನ್ನು ಹಿಡಿದು ಮುನ್ನಡೆದಿದ್ದಾರೆ.

ನಮ್ಮಲ್ಲಿ ಅಮೆರಿಕಾ ಎಂದಾಕ್ಷಣ ಅದೊಂದು ಗಂಧರ್ವಲೋಕ, ಜೀವಮಾನದಲ್ಲೊಮ್ಮೆಯಾದರೂ ಈ ದೇಶದ ಪ್ರವಾಸ ಮಾಡಬೇಕೆಂಬ ಉತ್ಕಟ ಬಯಕೆ ಹೊಂದಿರುವವರನೇಕ. ಆದರೆ ದ್ವಾರಕಾನಾಥರಲ್ಲಿ ಈ ರೀತಿಯ ಯಾವುದೇ ಉತ್ಕಟತೆಯನ್ನು ಕಾಣಲಾರೆವು. ಗೋಮುಖ ವ್ಯಾಘ್ರದಂತಿರುವ ಸಾಮ್ರಾಜ್ಯಶಾಹಿ ಮನೋಭಾವದ ಅಮೆರಿಕಾವನ್ನು ಕಂಡರಾಗದ ಅವರು ಅಕ್ಕ ಸಮ್ಮೇಳನ ಹಾಗೂ ಅವರ ಗೆಳೆಯ ರೆಡ್ಡಿಯ ಒತ್ತಾಯಕ್ಕಾಗಿ ಪ್ರವಾಸ ಕೈಗೊಳ್ಳುತ್ತಾರೆ. ಹಾಗಾಗಿ ಇವರ ಪ್ರವಾಸ ಕಥನದಲ್ಲಿ ಅಮೆರಿಕಾ ದೇಶದ ಬಗ್ಗೆ ಹೊಗಳಿಕೆಯನ್ನು ಕಾಣಲಾಗುವುದಿಲ್ಲ. ಆ ದೇಶದ ಮತ್ತೊಂದು ಮುಖದ ಅನಾವರಣವೇ ಅವರ ಪ್ರವಾಸ ಕಥನದ ಉದ್ದೇಶ. ನಮ್ಮಲ್ಲಿ ಹೇಗೆ ಜಾತಿ ಸಂಘರ್ಷ, ಜೀತಗಾರಿಕೆ ಇದೆ. ಅದೇ ರೀತಿ ಅಲ್ಲಿ ವರ್ಣ ಸಂಘರ್ಷ, ಗುಲಾಮಗಿರಿ ಇದೆ. ಹಾಗಾಗಿ ದ್ವಾರಕಾನಾಥರು ಭೇಟಿ ಇತ್ತ ಪ್ರತಿನಗರದ ಸ್ಮಾರಕಗಳ ವಿವರಣೆಯಲ್ಲಿಯೂ ಕರಿಯರ ಬವಣೆ, ಅವರ ಹೋರಾಟ ಅದರಿಂದ ಅವರು ಎದುರಿಸಬೇಕಾಗಿ ಬಂದ ಕಷ್ಟಗಳನ್ನು ನಮ್ಮ ಮುಂದೆ ತೆರೆದಿಡುತ್ತಾರೆ. ಇಂತ ಕಷ್ಟಗಳ ನಡುವೆಯೂ ಸಾಧಕರಾದ

ಕರಿಯ ಲಿಜೆಂಡ್‌ಗಳ ಸಾಧನೆಯನ್ನು ತೋರಿಸುತ್ತಾರೆ. ಅಷ್ಟೇ ಅಲ್ಲದೆ ಅಲ್ಲಿಯ ಪ್ರತಿಯೊಂದು ಸನ್ನಿವೇಶವನ್ನು ಭಾರತದೊಂದಿಗೆ ಹೋಲಿಸುತ್ತಾ ನಮ್ಮ ದೇಶವನ್ನು ಕಾಣುವ ಪರಿ ಅದ್ಭುತವಾಗಿದೆ. ಹಾಗಾಗಿ ಅಧ್ಯಯನದ ದೃಷ್ಟಿಯಿಂದ ಈ ಮೂರೂ ಅಂಶಗಳನ್ನು ಆಧರಿಸಿ ಅವರ ಪ್ರವಾಸ ಕಥನವನ್ನು ವಿಶ್ಲೇಷಿಸಲಾಗುವುದು.

### 6.1 ಅಮೆರಿಕಾದ ವರ್ಣ ಸಂಘರ್ಷ ಹಾಗೂ ಗುಲಾಮಗಿರಿ

ದ್ವಾರಕಾನಾಥರ ನಿಜವಾದ ಪ್ರವಾಸ ಪ್ರಾರಂಭವಾಗುವುದು ಬಾಲ್ಟಿಮೋರ್‌ನಿಂದ, ಬಾಲ್ಟಿಮೋರ್ ಅಮೆರಿಕಾದ ಎಲ್ಲಾ ನಗರಗಳಂತೆ ಬೃಹತ್ ಕ್ರೀಡಾಂಗಣ, ಮ್ಯೂಸಿಯಂ, ಗಗನಚುಂಬಿ ಕಟ್ಟಡಗಳನ್ನು ಹೊಂದಿರುವ ವೈಭವಯುತ ನಗರವಾಗಿದ್ದರೂ, ಇದ್ಯಾವುದೂ ಅವರನ್ನು ಆಕರ್ಷಿಸುವುದಿಲ್ಲ. ಅವರೇ ಹೇಳುವಂತೆ 'ಬಾಲ್ಟಿಮೋರ್ ಅಮೆರಿಕದ ಅನೇಕ ನಗರಗಳಂತೆ ಝುಗಝುಗಸುತ್ತದೆ. ಎಲ್ಲಾ ಕಡೆ ಇರುವಂತೆಯೇ ಇಲ್ಲಿಯೂ ಬೃಹತ್ ಕ್ರೀಡಾಂಗಣಗಳು ಮ್ಯೂಸಿಯಂಗಳು, ಗಗನಚುಂಬಿ ಕಟ್ಟಡಗಳಿವೆ. ಆದರೆ ಈ ವೈಭವಯುತ ಕಟ್ಟಡಗಳ ನಡುವೆ ಇಲ್ಲಿನ ಕರಿಯರು ಅನುಭವಿಸಿದ ಗುಲಾಮಗಿರಿ, ಅಸಹಾಯತೆಗಳ ನಿಟ್ಟುಸಿರು, ನೋವಿನ ದನಿ ಸೂಕ್ಷ್ಮವಾಗಿ ಕೇಳಿಸುತ್ತದೆ. ಅಂತೆಯೇ ಬಾಲ್ಟಿಮೋರ್‌ನ ಗರ್ಭದಲ್ಲಿ ಕರಿಯರು ತಮ್ಮ ಕನಿಷ್ಠ ಹಕ್ಕುಗಳಿಗಾಗಿ ನಡೆಸಿದ ದೀರ್ಘ ಹೋರಾಟದ ಜೀವಂತ ಪಳೆಯುಳಿಕೆಗಳು ಅಡಗಿವೆ" [1]ಎಂಬಲ್ಲಿ ಇವರು ಆ ನಗರದಲ್ಲಿ ನೋಡಿದ್ದು, ನೋಡಲು ಪ್ರಯತ್ನಿಸಿದ್ದು ಕರಿಯರ ಹೋರಾಟದ ಹೆಜ್ಜೆ ಗುರುತುಗಳನ್ನೇ ಹೊರತು ಅಲ್ಲಿದ್ದ ನಿರ್ಜೀವವಾದ ಕಟ್ಟಡಗಳ ಸೌಂದರ್ಯವನ್ನಲ್ಲ. ಇದೇ ನಗರದಲ್ಲಿರುವ 'ಮ್ಯಾಕ್ ಹೆನ್ರಿ' ಎಂಬ ಕೋಟೆಯನ್ನು ನೋಡುತ್ತಾ "ಇದು ಕೇವಲ ಇಟ್ಟಿಗೆಯಲ್ಲಿ ಕಟ್ಟಿರುವ ಗೋಡೆ ನಮ್ಮ ಕರ್ನಾಟಕದ ದೊಡ್ಡ ಕೋಟೆಗಳಿಗೆ ಹೋಲಿಸಿದರೆ ಇದು ಪುಟ್ಟ ಗೂಡು" ಎಂದಿದ್ದಾರೆ. ಆದರೆ ಅದರ ಹಿಂದೆ ಅಡಗಿರುವ ಇತಿಹಾಸ ಅಷ್ಟು ಪುಟ್ಟದಲ್ಲ.

1812ರಲ್ಲಿ ಅಮೆರಿಕಾ ಬ್ರಿಟಿಷರ ವಿರುದ್ಧ ಯುದ್ಧ ಘೋಷಿಸಿದಾಗ, ಬಾಲ್ಟಿಮೋರ್ ಸಂಪೂರ್ಣವಾಗಿ ನಾಶವಾಗುತ್ತದೆಂದು ಭಾವಿಸಲಾಗಿತ್ತು. ಆದರೆ ಇದೇ ಮ್ಯಾಕ್ ಹೆನ್ರಿ ಕೋಟೆಯ ಹಿಂದೆ ನಿಂತಿದ್ದ ಸಾವಿರಕ್ಕೂ ಹೆಚ್ಚು ಅಮೆರಿಕ ಸೈನಿಕರು ಕೆಚ್ಚೆದೆಯಿಂದ ಹೋರಾಟವನ್ನು ಮಾಡಿ ತಮ್ಮ ನಗರವನ್ನು ಉಳಿಸಿ ಕೊಂಡ ಬಗೆಯನ್ನು ತಿಳಿಸುತ್ತಾ ಇಲ್ಲಿಯೂ ಕರಿಯರಿಗಾದ ಅನ್ಯಾಯವನ್ನು ಎತ್ತಿ ಹಿಡಿದಿದ್ದಾರೆ. ಈ ಘಟನೆ ಅಮೆರಿಕಾದ ಚರಿತ್ರೆಯ ಪುಟದಲ್ಲಿ ಇದೆಯಾದರೂ ಆ ಚರಿತ್ರೆಯನ್ನು ಬರೆದ ಬಿಳಿಯರು ತಮ್ಮ ಪ್ರಾಣವನ್ನೂ ಲೆಕ್ಕಿಸದೆ ದೇಶಕ್ಕಾಗಿ ಹೋರಾಡಿ ಮಡಿದ ಕರಿಯರನ್ನು ಕನಿಷ್ಠ ಪಕ್ಷ ನೆನಪಿಸಿಕೊಳ್ಳುವ ಸೌಜನ್ಯವನ್ನೂ ತೋರಿಸಿಲ್ಲ "ಆ ಸೈನಿಕರಲ್ಲಿ

---

1. ಅಮೆರಿಕಾ ಆಮುಖ ; ಪುಟ - 22

ಕರಿಯರೂ ಪ್ರಮುಖರಾಗಿದ್ದರೆಂಬುದನ್ನು ಚರಿತ್ರೆ ಬರೆದ ಬಿಳಿಯರು ಮರೆತು ಹೋಗಿದ್ದಾರೆ" [2] ಎಂಬಲ್ಲಿ ವ್ಯಕ್ತವಾಗಿರುವ ವಿಷಾದಷ್ಟೇ ಅಲ್ಲದೆ ಕರಿಯರ ಮೇಲೆ ಬಿಳಿಯರು ಎಲ್ಲೆಲ್ಲಿ ದೌರ್ಜನ್ಯ ನಡೆಸಲೂ ಸಾಧ್ಯವೋ ಅಲ್ಲೆಲ್ಲಾ ದೌರ್ಜನ್ಯವೆಸಗಿದ್ದಾರೆ ಎಂಬ ಭೇದದ ಭಾವವು ಇಲ್ಲಿ ವ್ಯಕ್ತವಾಗಿದೆ.

ಹೀಗೆ 275 ವರ್ಷಗಳ ಹಿಂದೆ ಹುಟ್ಟಿಕೊಂಡ ಈ ನಗರ ಆಂಗ್ಲೋ-ಅಮೆರಿಕನ್ ಯುದ್ಧ, ಅಮೆರಿಕದ ಕ್ರಾಂತಿ, ಜಾಗತಿಕ ಯುದ್ಧ ಮತ್ತು ವರ್ಣೀಯ ಸಂಘರ್ಷದಂತಹ ಐತಿಹಾಸಿಕ ಘಟನೆಗಳಿಗೆ ಸಾಕ್ಷಿಯಾದ ಬಗೆಯನ್ನು ವಿವರಿಸುತ್ತಾ ಹೋಗುತ್ತಾರೆ. ನಮ್ಮಲ್ಲಿ ಅಸ್ಪೃಶ್ಯರನ್ನು ಹೇಗೆ ದೇವಾಲಯದ ಒಳಗೆ ಬರಲು ಬಿಡುತ್ತಿರಲಿಲ್ಲವೋ ಅದೇ ರೀತಿ ಇವರೆಲ್ಲರ ದೇವನೊಬ್ಬನೇ ಆಗಿದ್ದರು. ಕರಿಯರನ್ನು ಚರ್ಚ್‌ನಲ್ಲಿ ಬಿಳಿಯರೊಂದಿಗೆ ಕುಳಿತುಕೊಳ್ಳಲೂ ಬಿಡುತ್ತಿರಲಿಲ್ಲ. ಈ ವ್ಯವಸ್ಥೆಯ ವಿರುದ್ಧವಾಗಿ ದನಿ ಎತ್ತಿ ತಮ್ಮದೇ ಆದ ಚರ್ಚ್‌ಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಇಂತಹ ಚರ್ಚ್‌ಗಳೇ ಅಮೆರಿಕದ ಸಾಮಾಜಿಕ ಬದಲಾವಣೆಗೆ ಕಾರಣವಾದುವೆಂದು, ಹೇಳಬಹುದು. ಈ ರೀತಿ ವರ್ಣಭೇದದ ವಿರುದ್ಧ ಹೋರಾಡಲು ನಾಂದಿ ಹಾಡಿದ ಚರ್ಚ್‌ಗಳು ಬಾಲ್ಟಿಮೋರ್ ಹಾಗೂ ಡೌನ್‌ಟೌನ್‌ಗಳಲ್ಲಿದ್ದು ಅಂತಹ ಚರ್ಚ್‌ಗಳನ್ನು ನೋಡುವ ಸಲುವಾಗಿಯೇ ಈ ನಗರಗಳಿಗೆ ಹೋಗುತ್ತಾರೆ. ಇದರಿಂದ ದ್ವಾರಕಾನಾಥರಿಗೆ ಕರಿಯರ ಹೋರಾಟದ ಹಿನ್ನೆಲೆಯನ್ನು ತಿಳಿಯುವ ಉತ್ಸುಕತೆ ಇದೆಯೇ ಹೊರತು, ಆ ನಗರ ಸೌಂದರ್ಯದಲ್ಲಲ್ಲ.

ಇಷ್ಟೆಲ್ಲಾ ಐತಿಹಾಸಿಕ ಹಿನ್ನಲೆಯನ್ನೊಳಗೊಂಡ ಬಾಲ್ಟಿ ಮೋರ್ ನಗರದ ಉಲ್ಲೇಖ ಟಿ.ಕೆ. ರಾಮರಾವ್‌ರವರ "ಗೋಳದ ಮೇಲೊಂದು ಸುತ್ತು" ಪ್ರವಾಸ ಕಥನದಲ್ಲಿದೆ. ಆದರೆ ಅದು ವಾಷಿಂಗ್‌ಟನ್ ನಗರಕ್ಕೆ ಹೋಗುವಾಗ ಈ ಪಟ್ಟಣವನ್ನು ಹಾದು ಹೋಗಬೇಕೆಂಬುದಕ್ಕೆ ಸೀಮಿತವಾಗಿದೆ.

ಇದೇ ನಗರದಲ್ಲಿರುವ ಮಾರ್ಗನ್‌ಸ್ಟೈಟ್ ಯೂನಿವರ್ಸಿಟಿಯ ಥರ್‌ಗುಡ್ ಮಾರ್ಷಲ್‌ರ ಸ್ಮಾರಕವನ್ನು ವೀಕ್ಷಿಸುತ್ತಾ ದ್ವಾರಕಾನಾಥರು "ಈ ವಿಶ್ವವಿದ್ಯಾಲಯ ಇಂದು ಎಲ್ಲರಿಗೂ ತೆರೆದು ನಿಂತಿದೆಯಾದರೂ ಅಂದು ಈ ವಿಶ್ವವಿದ್ಯಾಲಯ ಕರಿಯರು ಕರಿಯರಿಗಾಗಿ ಕಟ್ಟಿದ ವಿಶ್ವವಿದ್ಯಾಲಯವಾಗಿತ್ತು. ಇದರ ಹಿಂದೆಯೂ ಒಂದು ನೋವಿನ ಚರಿತ್ರೆಯಿತ್ತು" [3] ಎಂದು ಮತ್ತೊಮ್ಮೆ ತಮ್ಮ ವಿದ್ಯಾಭ್ಯಾಸಕ್ಕಾಗಿ, ಸಮಾನತೆಗಾಗಿ, ತಮ್ಮ ಹಕ್ಕುಗಳಿಗಾಗಿ ಹೋರಾಡಿದ ಕರಿಯರ ಹೋರಾಟದ ಇತಿಹಾಸ ಪುಟಗಳನ್ನು ತಿರುವಿ ಹಾಕುತ್ತಾರೆ. ಅಬ್ರಹಾಂ ಲಿಂಕನ್ ಅಧ್ಯಕ್ಷನಾಗಿದ್ದಾಗ ಗುಲಾಮಗಿರಿಯನ್ನು ಅಳಿಸಿ ಹಾಕಲು ಅಮೆರಿಕದ ಸಂವಿಧಾನಕ್ಕೆ ತಿದ್ದುಪಡಿ ತರುತ್ತಾನೆ. ಈ ತಿದ್ದುಪಡಿಯಾಗಿ ದಶಕಗಳೇ ಉರುಳಿದರು, ಕರಿಯರು ಬಿಳಿಯರ ಶಾಲೆಗೆ

2. -ಅದೇ- ಪುಟ -23

3. -ಅದೇ -ಪುಟ -25

ಹೋಗುವಂತಿರಲಿಲ್ಲ. ಈ ತಾರತಮ್ಯವನ್ನು ಪ್ರಶ್ನಿಸಿ ಥರ್‌ಗುಡ್ ಮಾರ್ಷಲ್ ಸುಪ್ರೀಂ ಕೋರ್ಟಿನಲ್ಲಿ ದಾವೆ ಹೂಡಿ ಗೆಲುವನ್ನು ಸಾಧಿಸುತ್ತಾನೆ. ಸುಪ್ರೀಂ ಕೋರ್ಟ್ ಅಮೆರಿಕದಲ್ಲಿ ಇನ್ನು ಮುಂದೆ ಕರಿಯರಿಗೆ ಮತ್ತು ಬಿಳಿಯರಿಗೆ ಒಂದೇ ಶಾಲೆ ಎಂದು ತೀರ್ಪನ್ನು ನೀಡುತ್ತದೆ. ಈ ವಿಚಾರವನ್ನು ಹೇಳುತ್ತಾ ದ್ವಾರಕಾನಾಥರು "ಅಮೆರಿಕಾ ಸಂವಿಧಾನದಲ್ಲಿ ಗುಲಾಮಗಿರಿಯನ್ನು ಅಳಿಸಿ ಹಾಕುವ ತಿದ್ದುಪಡಿಯನ್ನು ತಂದಿದ್ದರು. ಅದನ್ನು ಆಚರಿಸಲಾಗುತ್ತಿರಲಿಲ್ಲ. ನಮ್ಮ ಸಂವಿಧಾನದಲ್ಲಿ ಅಸ್ಪೃಶ್ಯತೆಯನ್ನು ಅಳಿಸಿ ಹಾಕಿ ಅರ್ಧ ಶತಮಾನವಾದರೂ ಅಸ್ಪೃಶ್ಯತೆ ಇಂದೂ ಆಚರಣೆಯಲ್ಲಿದೆಯಲ್ಲ ಹಾಗೆ" [4]ಎಂದು ನಮ್ಮ ಸಮಾಜ ವ್ಯವಸ್ಥೆ ಹಾಗೂ ಅಲ್ಲಿನ ಸಮಾಜ ವ್ಯವಸ್ಥೆಯಲ್ಲಿರುವ ಸಾಮ್ಯತೆಯನ್ನು ಗುರುತಿಸುತ್ತಾರೆ.

ಗೊರೂರು ರಾಮಸ್ವಾಮಿ ಅಯ್ಯಂಗಾರವರು ತಮ್ಮ ಪ್ರವಾಸ ಕಥನದಲ್ಲಿಯೂ ಇಂತದ್ದೇ ಒಂದು ಘಟನೆಯನ್ನು ವಿವರಿಸುತ್ತಾರೆ. ಅವರು ಅಮೆರಿಕಾದ ಯಾವುದೋ ಸಭೆಯಲ್ಲಿ ಮಾತನಾಡುತ್ತಿರುವಾಗ ಅವರಿಗೆ ಭಾರತದಲ್ಲಿರುವ ಅಸ್ಪೃಶ್ಯತೆಯ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಕೇಳಲಾಗುತ್ತದೆ. ಅದಕ್ಕೆ ಗೊರೂರು ಏನೆಲ್ಲಾ ಸಮಜಾಯಿಷಿಯನ್ನು ನೀಡುತ್ತಿದ್ದರು ಅದನ್ನು ಒಪ್ಪಿ ಕೊಳ್ಳಲು ಆ ಜನತೆ ಸಿದ್ಧರಿರಲಿಲ್ಲ ಕೊನೆಗೆ "ನೀಗ್ರೋಗಳ ವಿಷಯದಲ್ಲಿ ನೀವು ಯಾಕೆ ಹೀಗಿದ್ದೀರಿ. ಇವತ್ತೂ ಸಹ ಕಾನೂನಿನಲ್ಲಿ ನೀಗ್ರೋಗಳಿಗೆ ಸಮಾನತೆಯಿದ್ದರೂ ನಿಮ್ಮ ಹೋಟೆಲುಗಳಿಗೆ ಅವರನ್ನು ಕೊಠಡಿಗಳು ಖಾಲಿ ಇಲ್ಲವೆಂಬ ನೆಪದಿಂದ ಸೇರಿಸುವುದಿಲ್ಲ ಯಾಕೆ? ಎಂದು ಕೇಳಿದಾಗ ಮಾತ್ರವೇ ಅವರ ಬಾಯಿ ಮುಚ್ಚುತ್ತಿತ್ತು" [5]ಎಂದಿದ್ದಾರೆ. ವೇದ ಹೇಳಲಿಕ್ಕಾಯಿತು ಬದನೆಕಾಯಿ ತಿನ್ನಲಿಕ್ಕಾಯಿತು ಎಂಬ ಗಾದೆಯಂತೆ ಅಮೆರಿಕಾದವರ ನಿಲುವು. ತಮ್ಮ ನಡೆಯಲ್ಲಿ ಬದಲಾವಣೆ ತಂದು ಕೊಳ್ಳದೇ ಬೇರೆಯವರ ತಪ್ಪುಗಳನ್ನು ಮಾತ್ರ ಎತ್ತಿ ತೋರಿಸುವ ಗುಣ ಕಾಣುತ್ತದೆ.

ಕರಿಯರು ತಮಗಾಗುತ್ತಿರುವ ಅನ್ಯಾಯದ ವಿರುದ್ಧ ದನಿ ಎತ್ತಿ ನ್ಯಾಯಾಂಗ ಹೋರಾಟದ ಮೂಲಕ ನ್ಯಾಯವನ್ನು ಪಡೆದುಕೊಳ್ಳುತ್ತಿದ್ದಾರೆ. ಆದರೆ ನಮ್ಮ ದೇಶದಲ್ಲಿನ್ನೂ ಆ ಪರಿಸ್ಥಿತಿ ನಿರ್ಮಾಣವಾಗಿಲ್ಲ. ಈ ವಿಚಾರದಲ್ಲಿ ಕರಿಯರನ್ನು ನೋಡಿ ನಾವು ಕಲಿಯಬೇಕಾಗಿದೆ. ಅವರು ಸಾಮಾಜಿಕ, ರಾಜಕೀಯ ಹೋರಾಟಕ್ಕಿಂತ ನ್ಯಾಯಾಂಗ ಹೋರಾಟದ ಮೂಲಕವೇ ತಮ್ಮ ಹಕ್ಕುಗಳನ್ನು ಪಡೆದಿದ್ದಾರೆ. ಆದರೆ ನಮ್ಮ ದಲಿತರ ಹೋರಾಟದಲ್ಲಿ ನ್ಯಾಯಾಂಗ ಹೋರಾಟದ ಕೊರತೆ ಇದೆ ಎಂಬುದು ದ್ವಾರಕಾನಾಥರ ನಿಲುವು. "ನಮ್ಮಲ್ಲಿನ ದಲಿತರು ತಮ್ಮ ಹಕ್ಕುಗಳಿಗಾಗಿ ಸಾಮಾಜಿಕ, ರಾಜಕೀಯ ಹೋರಾಟಗಳನ್ನು ಹಮ್ಮಿಕೊಂಡು ಈವರೆಗೂ

---

4. -ಅದೇ -ಪುಟ - 26

5. ಗೊರೂರು ರಾಮಸ್ವಾಮಿ ಅಯ್ಯಂಗಾರ್; ಅಮೆರಿಕಾದಲ್ಲಿ ಗೊರೂರು; ಐಬಿಎಚ್ ಪ್ರಕಾಶನ ಪುಟ 308

ಗಮನೀಯ ಯಶಸ್ಸನ್ನು ಕಾಣದಾಗಿದ್ದಾರೆ. ಆದರೆ, ಇಲ್ಲಿನ ಕರಿಯರು ನ್ಯಾಯಂಗ ಹೋರಾಟದಲ್ಲಿ ತೊಡಗಿ ತಮ್ಮ ಹಕ್ಕುಗಳನ್ನು ಸಾಮಾಜಿಕ, ರಾಜಕೀಯ ಹೋರಾಟಗಳನ್ನು ಹಮ್ಮಿಕೊಂಡು ಈವರೆಗೂ ಗಮನೀಯ ಯಶಸ್ಸನ್ನು ಕಾಣದಾಗಿದ್ದಾರೆ. ಆದರೆ, ಇಲ್ಲಿನ ಕರಿಯರು ನ್ಯಾಯಾಂಗ ಹೋರಾಟದಲ್ಲಿ ತೊಡಗಿ ತಮ್ಮ ಹಕ್ಕುಗಳನ್ನು ಗಿಟ್ಟಿಸಿ ಕೊಳ್ಳುತ್ತಿದ್ದಾರೆ. ವೈಯಕ್ತಿಕವಾಗಿ ನನಗನಿಸುವಂತೆ ನಮಗಿದು ಪಾಠವಾಗಬೇಕಿದೆ" [6] ವೃತ್ತಿಯಲ್ಲಿ ಇವರು ವಕೀಲರಾಗಿರುವುದರಿಂದ ಅವರ ಈ ಪ್ರತಿಕ್ರಿಯೆ ಸಹಜವೇ ಆಗಿದೆ.

"ನಾವಿದ್ದ ಹೋಟೆಲ್‌ನಿಂದ ಸುಮಾರು ಹತ್ತು ಮೈಲಿ ದೂರದ ಮೌಂಟ್ ರೋಡ್ ರಸ್ತೆಯಲ್ಲಿರುವ ಎನ್.ಎ.ಎ.ಸಿ.ಪಿ.ಯ ಕಛೇರಿ ನಮ್ಮಂತಹ ಪ್ರವಾಸಿಗರಿಗೆ ಬಹು ಮುಖ್ಯ. ಅಮೆರಿಕದ ಗುಲಾಮಗಿರಿಯ ಕರಾಳ ದಿನದಿಂದ ಹಿಡಿದು ಈಗಲೂ ಕರಿಯರು ಮತ್ತು ಹೊಸದಾಗಿ ವಲಸೆ ಬಂದ ರೆಡ್ಡಿಯಂತಹ ಅಲ್ಪಸಂಖ್ಯಾತರ ಮೇಲೆ ನಡೆಯುವ ಶೀತಲ ದಬ್ಬಾಳಿಕೆಯ ಬಗ್ಗೆ ಈ ಕಛೇರಿಯಲ್ಲಿ ಸಾಕಷ್ಟು ವಿವರಗಳು ಸಿಗುತ್ತವೆ" [7]ಎಂಬ ಅವರ ಮಾತುಗಳಲ್ಲಿ ಅವರು ಎಂತಹ ಪ್ರವಾಸಿಗರು, ಅವರ ಪ್ರವಾಸದ ಉದ್ದೇಶವೇನೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅವರ ಪ್ರವಾಸ ತಾತ್ತ್ವಿಕ ಚೌಕಟ್ಟನ್ನು ಒಳಗೊಂಡಂತಹದ್ದು. ಕರಿಯರು ಈ ದೇಶದಲ್ಲಿ ಅನುಭವಿಸಿದ ದಬ್ಬಾಳಿಕೆ, ದೌರ್ಜನ್ಯ, ನೋವುಗಳು ಹಾಗೂ ಅದರ ವಿರುದ್ಧ ಹೋರಾಡಿ ಗಳಿಸಿದ ಯಶಸ್ಸಿನ ಯಶೋಗಾಥೆಯನ್ನು ತಿಳಿಯುವುದು ಹಾಗೂ ಅದನ್ನು ತಮ್ಮ ಪ್ರವಾಸ ಕಥನದ ಮೂಲಕ ತಿಳಿಸುವುದೇ ಆಗಿದೆ.

ಸ್ಪ್ರಿಂಗ್ ಫೀಲ್ಡ್ ಎಂಬ ನಗರದಲ್ಲಿರುವ ಎನ್.ಎ.ಎ.ಸಿ.ಪಿ.ಯ ಕಛೇರಿಗೆ ಭೇಟಿ ನೀಡಿ ಈ ಸಂಘಟನೆ ರೂಪುಗೊಳ್ಳಲು ಕಾರಣವಾದ ಘಟನೆಗಳನ್ನು ಇಲ್ಲಿ ಬಿಚ್ಚಿಡುತ್ತಾರೆ. 1908ರಲ್ಲಿ ಇದೇ ಸ್ಪ್ರಿಂಗ್ ಫೀಲ್ಡ್ ನಗರದಲ್ಲಿದ್ದ ಪ್ರತಿಷ್ಠಿತ ಬಿಳಿಯರು ಎರಡು ದಿನಗಳ ಕಾಲ ಕರಿಯರ ಮೇಲೆ ರೊಚ್ಚಿಗೆದ್ದು ಆಕ್ರಮಣ ಮಾಡುತ್ತಾರೆ. ಆ ಆಕ್ರಮಣದಲ್ಲಿ ಅನೇಕ ಜನ ಕರಿಯರು ಸಾಯುತ್ತಾರೆ. ನೂರಾರು ಕರಿಯರು ಗಾಯಗೊಳ್ಳುತ್ತಾರೆ, ಸಾವಿರಾರು ಕರಿಯರು ಊರು ಬಿಟ್ಟು ಹೋಗುವಂತೆ ಮಾಡುತ್ತಾರೆ. ಆಗ ಎಚ್ಚೆತ್ತ ಕೆಲವು ಪ್ರಜ್ಞಾವಂತ ಬಿಳಿಯರು 1909ರಲ್ಲಿ 'ನ್ಯಾಷನಲ್ ನೀಗ್ರೋ ಕಮಿಟಿ'ಯನ್ನು ಸ್ಥಾಪಿಸುತ್ತಾರೆ. 1910ರಲ್ಲಿ ಈ ಕಮಿಟಿಗೆ ಎನ್.ಎ.ಎ.ಸಿ.ಪಿ. ಎಂಬ ಹೊಸ ಹೆಸರನ್ನು ನೀಡಲಾಗುತ್ತದೆ. ಈ ಸಂಘಟನೆಯೂ ದೇಶದ ಯಾವುದೇ ಮೂಲೆಯಲ್ಲಿ ಕರಿಯರ ವಿರುದ್ಧ ದೌರ್ಜನ್ಯ ನಡೆದರೆ ಅದನ್ನು ವಿರೋಧಿಸಿ ನ್ಯಾಯಾಂಗದ ಹೋರಾಟವನ್ನು ಮಾಡುತ್ತದೆ. ಇಂತ ಅದ್ಭುತ ಕಾರ್ಯವನ್ನು ಮಾಡುತ್ತಿರುವ ಸಂಘಟನೆಯ ಭೇಟಿ ಅದರ ಕಾರ್ಯವೈಖರಿಯನ್ನು ಗಮನಿಸುವುದು ಇವರ ಪ್ರವಾಸದ ಹಾಗೂ ಪ್ರವಾಸ ಕಥನದ ಮೂಲ

6.- ಅದೇ -ಪುಟ 26

7.-ಅದೇ -ಪುಟ

ಉದ್ದೇಶವೆಂದು ಹೇಳಬಹುದು. ಇವರು ಸಹ ಬಂಡಾಯ, ದಲಿತ ಸಂಘರ್ಷ ಸಮಿತಿ ಮತ್ತು ಇತರ ಜನಪರ ಸಂಘಟನೆಗಳೊಂದಿಗೆ ಗುರುತಿಸಿಕೊಂಡು ಹೋರಾಟವನ್ನು ಮಾಡಿರುವುದರಿಂದ ಅದೇ ನಿಟ್ಟಿನಲ್ಲಿಯೇ ಇವರು ಅಮೆರಿಕಾ ಪ್ರವಾಸ ಕೈಗೊಂಡಿರುವುದು ಕಂಡು ಬರುತ್ತದೆ.

'ನಯಾಗರದತ್ತ.... ಆ ನೆತ್ತರ ಹಾದಿಯಲ್ಲಿ........ಎಂಬ ಶೀರ್ಷಿಕೆಯನ್ನೊಳಗೊಂಡ ಏಳನೇ ಅಧ್ಯಾಯ ಹೆಸರಿಗೆ ತಕ್ಕದ್ದಾಗಿದೆ. ನಯಾಗಾರ ಫಾಲ್ಸ್ ಅಮೆರಿಕಾದ ಅದ್ಭುತ ಪ್ರಕೃತಿಯ ಸಿರಿಗಳಲ್ಲೊಂದು. ಅಮೆರಿಕಾ ಪ್ರವಾಸ ಕೈಗೊಂಡವರೆಲ್ಲರೂ ನಯಾಗಾರ ಫಾಲ್ಸ್‌ನ ಸೌಂದರ್ಯವನ್ನು ಸವಿಯದೇ ಬರುವುದಿಲ್ಲ. ಅಂತ ಸೌಂದರ್ಯದ ಖಣಿಯಾಗಿರುವ ನಯಾಗಾರಕ್ಕೆ ದ್ವಾರಕಾನಾಥರು ಯಾರ್ಕ್, ಗೆಟ್ಟಿಸ್‌ಬರ್ಗ್, ಹ್ಯಾರಿಸ್‌ಬರ್ಗ್ ನಗರಗಳ ಮಾರ್ಗವಾಗಿ ಹೋಗುತ್ತಾರೆ. ಈ ನಗರದ ತುಂಬೆಲ್ಲಾ ಇರುವ ಸ್ಮಾರಕಗಳು, ಅಂತರ್ಯುದ್ಧದಲ್ಲಿ ಬಳಸಲಾದ ಫಿರಂಗಿಗಳು, ಶಸ್ತ್ರಾಸ್ತ್ರಗಳು, ಯುದ್ಧದಲ್ಲಿ ಭಾಗವಹಿಸಿದ ನಾಯಕರ ಪ್ರತಿಮೆಗಳನ್ನು ವೀಕ್ಷಿಸುತ್ತಾ ನೂರೈವತ್ತು ವರ್ಷಗಳ ಹಿಂದೆ ನಡೆದ ಹಿಂಸಾಕಾಂಡವನ್ನು ಅದಕ್ಕೆ ಕಾರಣವಾದ ವಿಷಯವನ್ನು ಮೆಲುಕು ಹಾಕಿದ್ದಾರೆ. ಈ ಹಿಂಸಾಕಾಂಡದಲ್ಲಿ ಕೇವಲ ಮೂರು ದಿನಗಳಲ್ಲಿ 51 ಸಾವಿರ ಸೈನಿಕರ ಮಾರಣಹೋಮ ನಡೆದಿರುತ್ತದೆ. "ಅಮೆರಿಕ ಹಿಂದೆಂದೂ ಇಂತಹ ಸಾವು ನೋವನ್ನು ಕಂಡಿರಲಿಲ್ಲ. ಅಮೆರಿಕದ ನೆಲ ಈ ಮಟ್ಟದ ನೆತ್ತರನ್ನೂ ಹೀರಿರಲಿಲ್ಲ!" [8] ಎಂದು ಉದ್ಗರಿಸಿದ್ದಾರೆ. ಇಂತ ನೆತ್ತರಗಾಥೆಗೆ, ಅಂತರ್ಯುದ್ಧಕ್ಕೆ ಕಾರಣ ಅದೇ ಕರಿಯರನ್ನು ಕಾಡುತ್ತಿದ್ದ ಗುಲಾಮಗಿರಿ. ಈ ವಿಚಾರವಾಗಿ ಬಹಳ ದೊಡ್ಡ ಚರ್ಚೆ ನಡೆದು, ವಾದ ವಿವಾದಗಳು ತೀವ್ರ ಗೊಂಡಿದ್ದರ ಫಲವಾಗಿ ಮೊದಲು ಅಮೆರಿಕ ಸೈನ್ಯ ಹಾಗೂ ಬಂಡುಕೋರರ ನಡುವೆ ಚಿಕ್ಕಪುಟ್ಟ ಘರ್ಷಣೆ ನಡೆದು ನಂತರ ಅದು ಯುದ್ಧರೂಪವನ್ನು ತಾಳಿ ಇಷ್ಟು ದೊಡ್ಡ ಪ್ರಮಾಣದಲ್ಲಿ ನೆತ್ತರು ಹರಿಯುವಂತೆ ಮಾಡಿತು. "1863ರ ಜುಲೈನಲ್ಲಿ ಗೆಟ್ಟಿಸ್‌ಬರ್ಗ್‌ನಲ್ಲಿ ನಡೆದ ಕೇವಲ ಮೂರು ದಿನಗಳ ಯುದ್ಧದಲ್ಲಿ 51 ಸಾವಿರ ಸೈನಿಕರು ಪ್ರಾಣ ತೆತ್ತಿದ್ದರು! ಇದು ಇಡೀ ಮನುಕುಲವೇ ತಲೆ ತಗ್ಗಿಸುವಂತಹ ಸಾವು ನೋವಾಗಿತ್ತು. ನಾವು ಈ ಚರಿತ್ರೆಯಲ್ಲಿ ಮುಳುಗಿ ಹೋಗಿ, ನಮ್ಮ ಮುಂದೆ ನಿಂತಿದ್ದ ನಿರ್ಭಾವುಕ ಸ್ಮಾರಕಗಳನ್ನು ಸುತ್ತಾಡಿ ಮತ್ತೆ 1-83 ರಸ್ತೆ ಸೇರಿಕೊಂಡು ಹ್ಯಾರಿಸ್‌ಬರ್ಗ್ ಕಡೆಗೆ ಹೊರಟೆವು" ಎಂಬಲ್ಲಿ ಪ್ರತಿ ಸ್ಮಾರಕದ ಹಿಂದೆ ಇರುವ ಕಥೆ ವ್ಯಥೆಗಳನ್ನು ನಮ್ಮ ಮುಂದಿಡುತ್ತಾರೆ.

ಹ್ಯಾರಿಸ್‌ಬರ್ಗ್ ನಗರ ತಲುಪಿ ಅಲ್ಲಿನ ಕಟ್ಟಡ ಮತ್ತು ಚರ್ಚ್‌ಗಳನ್ನು ನೋಡಿದಾಗ ಮತ್ತೊಮ್ಮೆ ಗುಲಾಮಗಿರಿಯ ವಿರುದ್ಧವಾಗಿ ಹೋರಾಡಿದ ಕರಿಯರ ನೆನಪು ಮರುಕಳಿಸುತ್ತದೆ. ಕರಿಯರು ತಮ್ಮ ಸ್ವಾತಂತ್ರ್ಯಕ್ಕಾಗಿ ಗುಲಾಮಗಿರಿಯೆಂಬ ಕಬ್ಬಿಣದ ಸರಪಣಿಯಿಂದ ಬಿಡುಗಡೆ ಹೊಂದಲೂ ಹವಣಿಸುತ್ತಿದ್ದರು. ಅಂಡರ್‌ಗ್ರೌಂಡ್ ರೈಲ್ವೇ ಎಂಬ ರಹಸ್ಯ ವ್ಯವಸ್ಥೆಯ ಮೂಲಕ

8. -ಅದೇ -ಪುಟ 34

ಅಮೆರಿಕ, ಕೆನಡಾ, ಮೆಕ್ಸಿಕೋದಲ್ಲಿದ್ದ ಲಕ್ಷಾಂತರ ಕರಿಯರು ಸ್ವತಂತ್ರರಾದರೂ ಈ ಜಾಲವನ್ನಬ್ಬಿಸಿದವರು ಅಬಾಲಿಷನಿಸ್ಟರು ಮತ್ತು ಕರಿಯರ ಬಗ್ಗೆ ಅನುಕಂಪ ಉಳ್ಳವರು. ಲಕ್ಷಾಂತರ ಕರಿಯರು ಜೀತ ಮುಕ್ತರಾಗಲೂ ಕಾರಣರಾದವರನ್ನು ಇಲ್ಲಿ ನೆನಪಿಸಿಕೊಂಡಿದ್ದಾರೆ. ತಪ್ಪಿಸಿಕೊಂಡ ಗುಲಾಮರನ್ನು ಹಿಡಿಯಲು ಬಿಳಿಯರು 'ಬೌಂಟಿ ಹಂಟರ್' ಎಂಬ ಪಡೆಯನ್ನು ರಚಿಸಿಕೊಂಡ ಮೇಲಂತು ಕರಿಯರ ಮೇಲಿನ ದೌರ್ಜನ್ಯ ಮುಗಿಲು ಮುಟ್ಟುತ್ತದೆ.

"ತಮ್ಮ ಸ್ವಾತಂತ್ರ್ಯಕ್ಕಾಗಿ ಇಂತ ಅನಾಗರಿಕ ವಾತಾವರಣದಲ್ಲಿಯೂ ಜೀವದ ಹಂಗು ತೊರೆದು ಹೋರಾಡಿದ ಕರಿಯರ ಹೋರಾಟಗಳಲ್ಲಿ ನಮ್ಮಲ್ಲಿನ ದಲಿತರ ಹೋರಾಟಗಳಲ್ಲಿ ನನಗೆ ಅನೇಕ ಸಾಮ್ಯತೆಗಳು ಕಾಣ ತೊಡಗಿದವು" [9] ಎಂದು ಹೇಳುವಾಗ ನಮ್ಮಲ್ಲಿನ ದಲಿತರು ಅಲ್ಲಿನ ಕರಿಯರು ಬೇರೆ ಬೇರೆ ಎಂದೆನಿಸುವುದಿಲ್ಲ. ಇಬ್ಬರ ಹೋರಾಟದ ಉದ್ದೇಶವು ಒಂದೇ, ಇಬ್ಬರ ಸಮಸ್ಯೆಗಳು ಒಂದೇ ಆಗಿದೆ. ನಮ್ಮಲ್ಲಿ ಹೇಗೆ ದಲಿತರ ಮೇಲೆ ದೌರ್ಜನ್ಯಗಳು ನಡೆದಿವೆಯೋ, ಅದೇ ರೀತಿ ವಿಶ್ವಕ್ಕೆ ಹಿರಿಯಣ್ಣನಾದ ಅಮೆರಿಕಾದಲ್ಲಿ ಕರಿಯರ ಮೇಲೆ ನಡೆದಿದೆ. ಅಷ್ಟೇ ಅಲ್ಲದೆ ಎಷ್ಟೋ ಅಮಾನವೀಯ ಕೃತ್ಯಕ್ಕೂ ಅಮೆರಿಕ ಕಾರಣವಾಗಿದೆ. ಅಸ್ಪೃಶ್ಯತೆ ವರ್ಣಭೇದಗಳೆರಡೂ ಒಂದೇ ನಾಣ್ಯದ ಎರಡು ಮುಖಗಳು. ಹಾಗಾಗಿ ಇವರಿಬ್ಬರ ನೋವು, ಹೋರಾಟ ಒಂದೇ ಎಂಬುದನ್ನು ದ್ವಾರಕಾನಾಥರು ಇಲ್ಲಿ ಕಾಣಿಸಿದ್ದಾರೆ.

ಗೊರೂರರು ತಮ್ಮ ಪ್ರವಾಸ ಕಥನದಲ್ಲಿ ದ್ವಾರಕಾನಾಥರಂತೆ ನಮ್ಮಲ್ಲಿರುವ ಅಸ್ಪೃಶ್ಯತೆ ಹಾಗೂ ಅಮೆರಿಕಾದವರ ವರ್ಣಭೇದದ ನಡುವೆ ಇರುವ ಸಾಮ್ಯತೆಯನ್ನು ಗುರುತಿಸಿದ್ದಾರೆ. "ಅಮೆರಿಕನ್‌ರ ಆತ್ಮಸಾಕ್ಷಿಗೆ ಒಂದು ಸವಾಲಿನಂತಿರುವುದು ನೀಗ್ರೋಗಳ ಪ್ರಶ್ನೆ. ಹಿಂದೂ ಧರ್ಮಕ್ಕೆ ಅಸ್ಪೃಶ್ಯತೆ ಇರುವಂತೆ, ಸುಪ್ರೀಂ ನ್ಯಾಯಾಲಯ ಅವರಿಗೆ ಬಿಳಿಯರಿಗಿರುವ ಎಲ್ಲ ಹಕ್ಕುಗಳನ್ನೂ ನೀಡಿ, ಅಧ್ಯಕ್ಷ ಕೆನಡಿಯೇ ತನ್ನ ಪ್ರಾಣವನ್ನು ತೆರಬೇಕಾಗಿ ಬಂದರೂ ಅಮೆರಿಕ ಜನತೆಯ ಕೆಲವು ಭಾಗ ಈ ಕಾರ್ಯದಲ್ಲಿ ಸ್ವಪ್ರೇರಣೆಯಿಂದ ಸಹಕರಿಸುತ್ತಿಲ್ಲ." [10]ಎಂದಿದ್ದಾರೆ.

ಕರಿಯರ ಬಗ್ಗೆ ಅಪಾರ ಕಾಳಜಿ ಇದ್ದ ಅಮೆರಿಕಾದ ಅಧ್ಯಕ್ಷನಾದ ಮಾರ್ಟಿನ್ ಲೂಥರ್‌ಕಿಂಗ್, ಈತನ ಮ್ಯೂಸಿಯಂ ಮೆಂಪಿಸ್ ನಗರದಲ್ಲಿದೆ. ಈ ನಗರಕ್ಕೆ ಭೇಟಿ ಇತ್ತ ದ್ವಾರಕಾನಾಥರು ಆ ಮ್ಯೂಸಿಯಂ ಬಗ್ಗೆ ಹೇಳುತ್ತಾ "ಮಾರ್ಟಿನ್ ಲೂಥರ್‌ಕಿಂಗ್ ಎಂಬ ಅಮೆರಿಕದ ಗಾಂಧಿ ಅಂದು ಲೊರೈನ್ ಮೋಟೆಲ್‌ನ ಬಾಲ್ಕನಿಯಲ್ಲಿ ನಿಂತು ಕರಿಯರ ನೋವುಗಳು, ಅವನ್ನು ಮೆಟ್ಟಿ ನಿಲ್ಲಬೇಕಾದ ಹಕ್ಕುಗಳ ಬಗ್ಗೆ ಮಾತನಾಡುವಾಗ ರಸ್ತೆಯ ಆಚೆ ಅಡಗಿದ್ದ ಜೇಮ್ಸ್ ಹ್ಯಾರೀ ರೇ ಎಂಬ ಬಿಳಿ ಹಂತಕ ಹಾರಿಸಿದ ಗುಂಡಿಗೆ ಬಲಿಯಾದರು. ಮಾರ್ಟಿನ್ ಲೂಥರ್‌ಕಿಂಗ್ ಬಿದ್ದ ಜಾಗದಲ್ಲೀಗ ಎನ್.ಸಿ.ಆರ್.ಎಂ. ಎದ್ದು ನಿಂತಿದೆ. 1619ರಲ್ಲಿ ಬ್ರಿಟಿಷರು ಆಫ್ರಿಕಾದ ಕರಿ

9. -ಅದೇ -ಪುಟ -36

10. ಗೊರೂರು ರಾಮಸ್ವಾಮಿ ಅಯ್ಯಂಗಾರ್; ಅಮೆರಿಕಾದಲ್ಲಿ ಗೊರೂರು-ಪುಟ 307

ಗುಲಾಮರನ್ನು ಅಮೆರಿಕಕ್ಕೆ ಕರೆತಂದಾಗಿನಿಂದ ಹಿಡಿದು ಮಾರ್ಟಿನ್ ಲೂಥರ್ ಕಿಂಗ್ ಸಾಯೋವರೆಗೆ ನಡೆದ ವಿದ್ಯಮಾನಗಳ ವಿವರಗಳು ಅಲ್ಲಿ ಪ್ರದರ್ಶಿತವಾಗಿದ್ದವು" [11] ಕರಿಯರಲ್ಲಿ ಜಾಗೃತಿ ಮೂಡಿಸಿ ಅವರ ಹಕ್ಕುಗಳಿಗೆ ಹೋರಾಡಿದ, ಮಾನವೀಯತೆಯ ಪರವಾಗಿದ್ದವನನ್ನು ಎಷ್ಟು ಅಮಾನವೀಯವಾಗಿ ಹತ್ಯೆ ಮಾಡಲಾಯಿತು. ಹೀಗೆ ಮಾನವೀಯತೆಗಾಗಿ, ಮಾನವ ಹಕ್ಕುಗಳಿಗಾಗಿ ದುಡಿದವರು ಆ ದೇಶದವರಿಂದಲೇ ಹತರಾಗುವುದು ಒಂದು ವಿಪರ್ಯಾಸವೇ ಸರಿ. ನಮ್ಮ ದೇಶದ ಗಾಂಧೀಜಿ, ಆ ದೇಶದ ಮಾರ್ಟಿನ್ ಲೂಥರ್ ಕಿಂಗ್ ಹಾಗೂ ಜಾನ್, ಎಫ್ ಕೆನಡಿ. "ಇಂದಿಗೂ ಕೂಡ ಆ ಜಾಗಕ್ಕೆ ಜಗತ್ತಿನಾದ್ಯಂತ ಕರಿಯರು ಪವಿತ್ರ ಕ್ಷೇತ್ರಕ್ಕೆ ಬಂದಂತೆ ಹಿಂಡು ಹಿಂಡಾಗಿ ಬರುತ್ತಿರುತ್ತಾರೆ. ಅಲ್ಲಿ ಆ ಮ್ಯೂಸಿಯಂ ಅನ್ನು ಕಂಡು ಬಂದ ಕರಿಯರ ಮುಖದಲ್ಲಿ ಮಡುಗಟ್ಟಿದ ನೋವನ್ನು ಸುಲಭವಾಗಿ ಗುರುತಿಸಬಹುದು" [12] ಎಂದಿದ್ದಾರೆ. ಇಂದಿಗೂ ತಮ್ಮ ನಾಯಕನ ಸಾವು ಕರಿಯರಿಗೆ ತುಂಬಲಾರದ ನಷ್ಟವಾಗಿದೆ.

ಇದೇ ರೀತಿ ಡಲ್ಲಾಸ್ ನಗರದಲ್ಲಿರುವ ಅಮೆರಿಕದ ಮತ್ತೊಬ್ಬ ಜನಪ್ರಿಯ ಅಧ್ಯಕ್ಷನಾಗಿದ್ದ ಜಾನ್ ಎಫ್ ಕೆನಡಿ ಮ್ಯೂಸಿಯಂ ನೋಡುವಾಗಲೂ ಇದೇ ಭಾವವನ್ನು ವ್ಯಕ್ತ ಪಡಿಸಿದ್ದಾರೆ. "ಕೆನಡಿ ಭಾರತಕ್ಕೂ ತೀರ ಹತ್ತಿರವಾಗಿದ್ದವರು, ಕರಿಯರ ಬಗ್ಗೆ ಕಾಳಜಿಯುಳ್ಳವರಾಗಿದ್ದರಿಂದ ಭಾರತೀಯರಲ್ಲಿ ಕೂಡ ಕೆನಡಿ ಜನಪ್ರಿಯರಾಗಿದ್ದರು. ಇದರಿಂದಾಗಿ ಈ ಮ್ಯೂಸಿಯಂನ್ನು ನೋಡುವಾಗ ನಮ್ಮವರನ್ನೇ ಯಾರನ್ನೋ ಕಳಕೊಂಡಂತಹ ವೇದನೆಯಾಗುತ್ತದೆ [13] ದಲಿತ ಹಾಗೂ ಕರಿಯರ ಹೋರಾಟದಲ್ಲಿ ಸಾಮ್ಯತೆ ಇರುವುದರಿಂದ ಅವರ ಬಗ್ಗೆ ಕಾಳಜಿ ತೋರಿಸುವವ ರೆಲ್ಲರೂ ನಮ್ಮವರೇ ಎಂಬ ಭಾವ ದ್ವಾರಕಾನಾಥರು. ಇಷ್ಟೆಲ್ಲಾ ನೋವುಗಳನ್ನು ಅನುಭವಿಸಿದ ನೀಗ್ರೋಗಳನ್ನು ಕುರಿತು ಟಿ.ಕೆ.ರಾಮರಾವ್‌ರವರು ತಮ್ಮ "ಗೋಳದ ಮೇಲೊಂದು ಸುತ್ತು" ಪ್ರವಾಸ ಕಥನದಲ್ಲಿ ನೀಡಿರುವ ಪ್ರತಿಕ್ರಿಯೆ ಇದಕ್ಕೆ ತದ್ವಿರುದ್ಧವಾಗಿದೆ. "ಅವರ ರೂಪ ಆಕಾರಗಳಿಗೆ ತಕ್ಕಂತೆ ಜನ ನಿಬಿಡಸ್ಥಳಗಳಲ್ಲಿ ಅವರು ಹಾಕುವ ಹಲ್ಲೆ, ಕೂಗು, ಅಸಭ್ಯ, ನಡತೆಯನ್ನು ನೋಡಿ ನಮಗೆ ಅತೀವ ಜಿಗುಪ್ಸೆಯಾಗುತ್ತದೆ. ಆದರೆ ಬಿಳಿಯ ಅಮೆರಿಕನ್ ಇವೆಲ್ಲವನ್ನೂ ಸಹಿಸುತ್ತಾನೆ. ನೀಗ್ರೋ ಮಕ್ಕಳು ನಗರದ ಗಾಂಭೀರ್ಯವನ್ನು ಕಲಕುವಂತೆ ಅರಚಾಡುವುದನ್ನು ನೋಡಿ ಮುಗುಳು ನಗೆ ಬೀರುತ್ತಾನೆ. ಮುಂದುವರಿದ ರಾಷ್ಟ್ರದ ಪ್ರಜೆಯಾಗಿ ಮುಂದುವರಿದ ನಾಗರೀಕತೆಯನ್ನೇ ಪ್ರದರ್ಶಿಸುತ್ತಾನೆ" ಇಷ್ಟು ಮಾತ್ರವೇ ಅಲ್ಲದೆ "ಅವರು ಸೌಜನ್ಯರಹಿತರು, ಕಳ್ಳರು, ಕುಡುಕರು, ಇವರ ಹಕ್ಕುಗಳಿಗಾಗಿಯೇ ಇಬ್ಬರು ರಾಷ್ಟ್ರಾಧ್ಯಕ್ಷರು ಪ್ರಾಣ ಅರ್ಪಿಸಿದ್ದಾರೆ. ಇಷ್ಟಾಗಿ ಈ ಜನರಿಗೆ ಇನ್ನೇನು ಬೇಕೆಂಬುದು ನನಗೆ ಅರ್ಥವಾಗಿಲ್ಲ" [14] ಎಂದು ಹೇಳಿ ಅವರನ್ನು

11. -ಅದೇ -ಪುಟ -80

12. -ಅದೇ- ಪುಟ -80

13. -ಅದೇ -ಪುಟ - 89

14. ಟಿ.ಕೆ. ರಾಮರಾವ್ ; ಗೋಳದ ಮೇಲೊಂದು ಸುತ್ತು; ಧೃತಿ ಪ್ರಕಾಶನ; ಪುಟ 106 ರಿಂದ 108

ಕುರಿತು ನಮಗೆ ತಲುಪಿರುವ ಸುದ್ದಿ ತಪ್ಪು, ಅವರಿಗೆ ನಮ್ಮ ಸಹಾನುಭೂತಿ ಅನಗತ್ಯವೆಂದು ಬುದ್ಧಿ ಹೇಳುತ್ತಾರೆ. ಹಾಗಿದ್ದರೆ ಇಷ್ಟು ವರ್ಷಗಳ ಕಾಲ ಕರಿಯರು ಅನುಭವಿಸಿದ ನೋವುಗಳು ದೌರ್ಜನ್ಯಗಳೆಲ್ಲವು ಸುಳ್ಳೇ?

ದ್ವಾರಕಾನಾಥರ ಕೃತಿಯಲ್ಲಿ ಇದಕ್ಕೆ ಉತ್ತರ ಸಿಗುತ್ತದೆ. ವೇಕೋ ನಗರಕ್ಕೆ ಭೇಟಿ ಇತ್ತು ಅಲ್ಲಿ ನಡೆಯುತ್ತಿದ್ದ ಲಿಂಚಿಂಗ್ ಎಂಬ ದಾರುಣ ಆಚರಣೆಯ ಬಗ್ಗೆ ತಿಳಿಸುವಾಗ ಲಿಂಚಿಂಗ್ ಎಂಬುದು ಓಪನ್ ಪಬ್ಲಿಕ್ ಮರ್ಡರ್ ಅಂದರೆ ಸಾರ್ವಜನಿಕವಾಗಿ ಹಾಡುಹಗಲೇ ಕರಿಯನನ್ನು ಕೊಲ್ಲುವುದು. ನೂರಾರು ಜನ ಬಿಳಿಯರು ಸೇರಿ ಒಬ್ಬ ಕರಿಯನನ್ನು ಮರಕ್ಕೆ ನೇಣು ಹಾಕುತ್ತಿದ್ದರು. ಇಲ್ಲವೇ ಕಂಬಕ್ಕೆ ಕಟ್ಟಿ ಅವನಿಗೆ ಬೆಂಕಿ ಹಚ್ಚುತ್ತಿದ್ದರು. ಇದಕ್ಕೆ ಮಹಾಪರಾಧವೇ ಆಗಬೇಕೆಂದೇನು ಇರಲಿಲ್ಲ. ಸಣ್ಣಪುಟ್ಟ ತಪ್ಪುಗಳಿಗೂ ಲಿಂಚಿಂಗ್ ಮಾಡಲಾಗುತ್ತಿತ್ತು. ಎನ್ಎಎಸಿಪಿ ಕರಿಯರ ಸಂಘಟನೆ ಹುಟ್ಟಿಕೊಂಡ ಮೇಲೆ ಈ ಅಮಾನವೀಯ ಕೃತ್ಯಗಳ ಬಗ್ಗೆ ದನಿ ಎತ್ತಿದ ಮೇಲೆ ಇದು ನಿಯಂತ್ರಣಕ್ಕೆ ಬಂತು ಎಂದಿದ್ದಾರೆ. ವೇಕೋ ನಗರದ ಸಿಟಿಹಾಲ್‌ನ ಪ್ರಾಂಗಣದಲ್ಲಿದ್ದ ಒಂದು ಹಳೇ ಮರ ಇಂತ ಲಿಂಚಿಂಗ್ ಆಚರಣೆಗೆ ಸಾಕ್ಷಿಯಂತಿತ್ತು. ಆ ಮರಕ್ಕೆ ಲಿಂಚಿಂಗ್ ಆಚರಣೆಯಿಂದ ಬಲಿಯಾದ ಜೆಸ್ಸಿ ವಾಷಿಂಗ್ ಟನ್ ಎಂಬುವ ಯುವಕನ ಕತೆಯನ್ನು ಬಿಚ್ಚಿಡುತ್ತಾರೆ. "ಜೆಸ್ಸಿ ವಾಷಿಂಗ್‌ಟನ್ ಲೂಸಿ ಫ್ಲೇಯರ್ ಎಂಬ ಐವತ್ತಮೂರು ವರ್ಷದ ಮಹಿಳೆಯನ್ನು ಕೊಂದನೆಂದು ಆರೋಪಿಸಿ, ಹನ್ನೆರಡು ಜನರಿದ್ದ ಬಿಳಿಯ ಜ್ಯೂರಿಗಳು ಕೇವಲ ನಾಲ್ಕು ನಿಮಿಷದಲ್ಲಿ ಈತ ಅಪರಾಧಿ ಎಂಬ ತೀರ್ಮಾನಕ್ಕೆ ಬರುತ್ತಿದ್ದಂತೆ ಬಿಳಿಯರ ಗುಂಪೊಂದು ನ್ಯಾಯಾಲಯದ ಒಳಗೆ ನುಗ್ಗಿ ಆತನನ್ನು ದರದರನೆ ಹೊರಗೆಳೆದು ತಂದು ಅವನ ಕುತ್ತಿಗೆಗೆ ಕಬ್ಬಿಣದ ಸರಪಳಿಯನ್ನು ಸುತ್ತಿ ನೂರಾರು ಜನರ ಮುಂದೆ ಅವನ ಮೈಮೇಲೆ ಎಣ್ಣೆಯನ್ನು ಸುರಿದು ಸರಪಳಿಯ ಮತ್ತೊಂದು ತುದಿಯನ್ನು ಮರದ ಕೊಂಬೆಗೆ ಹಾಕಿ ಎಳೆದು ಅವನಿಗೆ ಬೆಂಕಿ ಹಚ್ಚಲಾಯಿತು. "ಹುಡುಗಬಾಯಿ ತೆರೆಯುವ ಮುಂಚೆಯೇ ತಣ್ಣಗೆ ಬೂದಿಯಾಗಿ ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ !" ಇಂತ ಹೃದಯವಿದ್ರಾವಕವಾದ ಕೃತ್ಯವನ್ನು ಬಿಳಿಯರು ಕರಿಯರ ಮೇಲೆ ಎಸಗುತ್ತಿದ್ದರೂ ನ್ಯಾಯಾಂಗವಾಗಲಿ, ಪೋಲೀಸರಾಗಲಿ ಸರ್ಕಾರವಾಗಲಿ ಯಾವ ಕ್ರಮವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಲೂಸಿಫ್ಲೇಯರ್‌ನನ್ನು ಕೊಂದವನು ಜೆಸ್ಸಿ ವಾಷಿಂಗ್‌ಟನ್ ಅಲ್ಲ; ಆಕೆಯ ಗಂಡ ಎಂಬ ಸತ್ಯವನ್ನು 'ಪಾಲ್‌ಕೀನ್ ವೀಕ್ಲಿ' ಪತ್ರಿಕೆಯು ಹೊರಹಾಕಿತು. ಆದರೆ ಅದರ ಸಂಪಾದಕ ಕರಿಯನಾಗಿದ್ದರಿಂದ ಅವನಿಗೂ ಶಿಕ್ಷೆ ವಿಧಿಸಲಾಯಿತು"[15] ಎಂದು ಹೇಳುತ್ತಾರೆ. ಕರಿಯನೆಂಬ ಒಂದೇ ಕಾರಣಕ್ಕೆ ಪೂರ್ವಾಪರ ಗಳೊಂದನ್ನೂ ಪರಾಮರ್ಶಿಸದೇ ಆತನನ್ನು ಅಪರಾಧಿ ಎಂದು ನಿರ್ಧರಿಸಿದ್ದು ನಾಗರೀಕತೆಯೇ? ನೇಣಿಗೆ ಬಿಗಿಯುವ ಮುನ್ನ ಆತನಿಗೆ ಮಾತನಾಡುವ ಅವಕಾಶವನ್ನು ನೀಡುವ ವ್ಯವಧಾನ, ತಾಳ್ಮೆ, ಮಾನವೀಯತೆ ಆ

15. -ಅದೇ -ಪುಟ -126 ರಿಂದ 128

ಬಿಳಿಯರಲ್ಲಿರಲಿಲ್ಲ. ಘಟನೆ ನಡೆದ ನಂತರವೂ ಆ ಪ್ರಕರಣಕ್ಕೆ ಸಂಬಂಧಿಸಿದಂತೆ 'ಪಾಲ್‌ಕ್ರೀನ್ ವೀಕ್ಲೀ' ಪತ್ರಿಕೆ ವಿಚಾರಣೆ ನಡೆಸಿ ಸತ್ಯವನ್ನು ಹೊರಗೆಡವಿದರು ಅದನ್ನು ನಂಬುವ ಔದಾರ್ಯ ಅಥವ ಮತ್ತೊಮ್ಮೆ ತಾವೇ ವಿಚಾರಣೆ ಮಾಡುವ ಸದ್ಬುದ್ಧಿ ಬಿಳಿಯರಲ್ಲಿರಲಿಲ್ಲ. ಇದು ಮುಂದುವರೆದ ರಾಷ್ಟ್ರದ ಮುಂದುವರೆದ ನಾಗರೀಕತೆಯ ಪ್ರದರ್ಶನವೇ! ಎಂಬ ಪ್ರಶ್ನೆ ನಮ್ಮ ಮನಸ್ಸಿನಲ್ಲಿ ಮೂಡದಿರದು.

ಕರಿಯರ ಮೇಲೆ ನಡೆಸಲಾಗುತ್ತಿದ್ದ ದೌರ್ಜನ್ಯದ ಇಂತದ್ದೇ ಒಂದು ಘಟನೆಯನ್ನು ಗೊರೂರು ತಮ್ಮ ಪ್ರವಾಸ ಕಥನದಲ್ಲಿಯೂ ಹೇಳಿದ್ದಾರೆ. "ಅಲ್ಬಾಮಾ ಪ್ರಾಂತದಲ್ಲಿ ಜಾನ್ ಹ್ಯಾರಿಸ್ ಎಂಬ ನೀಗ್ರೋ, ಅವನು ತನ್ನ ಕೆಲಸದಿಂದ ಹಿಂದಿರುಗುತ್ತಿರುವಾಗ ಪೋಲೀಸರು ಅವನನ್ನು ಕಳವು ಮತ್ತು ಬಿಳಿ ಹೆಣ್ಣನ್ನು ಕೆಣಕಿದ ಆರೋಪದ ಮೇಲೆ ಬಂಧಿಸಿದರು. ಆತ ಜೀವ ಉಳಿಸಿಕೊಳ್ಳುವ ಸಲುವಾಗಿ ಮಾಡದ ಅಪರಾಧವನ್ನು ಮಾಡಿದೆ ಎಂದು ಒಪ್ಪಿಕೊಂಡ. ಆತನಿಗೆ ಜೀವಾವಧಿ ಶಿಕ್ಷೆಯನ್ನು ನ್ಯಾಯಾಲಯ ವಿಧಿಸಿತು. ಸೆರೆಮನೆಯ ಅಧಿಕಾರಿಗಳ ಪ್ರೇರಣೆಯಿಂದ ದಂಗೆ ಎದ್ದು ನಾಲ್ಕು ನೀಗ್ರೋಗಳೂ, ಒಬ್ಬ ಗಾರ್ಡ್ ಮತ್ತು ಸೆರೆಮನೆ ನೌಕರರೂ ಸತ್ತರು. ಈ ದಂಗೆಗೆ ಕಾರಣ ಹ್ಯಾರಿಸ್ ಎಂದು ನ್ಯಾಯಲಯ ಆತನಿಗೆ ಮರಣ ದಂಡನೆಯನ್ನು ವಿಧಿಸಿತು."[16] ಈ ಎಲ್ಲಾ ಘಟನೆಗಳಿಂದ ಕರಿಯನೊಬ್ಬನ ಮೇಲೆ ನಡೆಯುತ್ತಿದ್ದ ದೌರ್ಜನ್ಯಗಳು ತಿಳಿದು ಬರುತ್ತದೆ.

ಇಂದು ಕರಿಯರಿಗೆ ಸಮಾನತೆ ಇದೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದುವರೆಯುವ ಹಕ್ಕನ್ನು ಅಮೆರಿಕಾ ಸರ್ಕಾರ ನೀಡಿದೆ. ಇಂದು ಕರಿಯರು ಇಮಿಗ್ರೇಷನ್, ಕ್ವಾರಂಟೈನ್, ಪಾಸ್‌ಪೋರ್ಟ್ ಇಲಾಖೆಗಳಲ್ಲಿ ಅಧಿಕಾರಿಗಳಾಗಿದ್ದಾರೆ. ಆಸ್ಪತ್ರೆಗಳಲ್ಲಿ ಸರ್ಜನ್, ನರ್ಸ್ ಕಾಲೇಜುಗಳಲ್ಲಿ ಪ್ರೊಫೆಸರ್‌ಗಳಾಗಿದ್ದಾರೆ; ವ್ಯಾಪಾರಿಗಳು, ಉದ್ಯಮಿಗಳೂ ಆಗಿದ್ದಾರೆ. ಇಷ್ಟೆಲ್ಲಾ ಸಮಾನತೆಗಳನ್ನು ನೀಡಿದ್ದರು. ನಮ್ಮಲ್ಲಿ ಹೇಗೆ ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ಅಳಿಸಲಾಗಿಲ್ಲವೋ, ಇನ್ನು ಅದು ನಮ್ಮ ನಡುವೆ ಜೀವಂತವಾಗಿದೆಯೋ ಅದೇ ರೀತಿ ಅಲ್ಲಿಯೂ ಅತ್ಯಂತ ಸೂಕ್ಷ್ಮವಾಗಿ ಇಂದಿಗೂ ವರ್ಣಭೇದ ಆಚರಿಸಲ್ಪಡುತ್ತಿವೆ ಎಂಬುದನ್ನು ದ್ವಾರಕಾನಾಥರು ವಾಂಕರಿ ಎಂಬ ಕಪ್ಪು ಹೆಣ್ಣು ಮಗಳೊಂದಿಗೆ ನಡೆದ ಮಾತುಕತೆಯ ಮೂಲಕ ಗುರುತಿಸಿದ್ದಾರೆ. "ಬಿಳಿಯರು ಕರಿಯರನ್ನು ಹೇಗೆ ನೋಡುತ್ತಾರೆ"? ಎಂಬ ದ್ವಾರಕಾನಾಥರ ಪ್ರಶ್ನೆಗೆ ಆಕೆ "ಎಷ್ಟೇ ಕೆಲಸ ಮಾಡಿದರೂ ಒಂದೇ ಒಂದು ಮೆಚ್ಚುಗೆಯ ಮಾತಾಡುವುದಿಲ್ಲ ಕಷ್ಟದ ಕೆಲಸಗಳನ್ನು ಹುಡುಕಿ ಕರಿಯರಿಗೆ ಕೊಡುತ್ತಾರೆ. ಕರಿಯ ಹೆಣ್ಣುಗಳೊಂದಿಗೆ ಬಿಳಿಯರು ದೈಹಿಕ ಸಂಪರ್ಕವನ್ನು ಹೊಂದಲು ಇಚ್ಛಿಸುತ್ತಾರೆಯೇ ಹೊರತು ಅವರನ್ನು ಮದುವೆಯಾಗಲೂ ಮುಂದಾಗುವುದಿಲ್ಲ. ಬಿಳಿಯ ಹೆಂಗಸರು ಕರಿಯ ಗಂಡಸರನ್ನು ಸ್ವೀಕರಿಸಿದ್ದಾರೆ. ಆದರೆ ಕರಿಯ ಹೆಣ್ಣುಗಳನ್ನು

---

16. ಗೊರೂರು ರಾಮಸ್ವಾಮಿ ಅಯ್ಯಂಗಾರ್; ಅಮೆರಿಕಾದಲ್ಲಿ ಗೋರೂರು ; ಪಿಬಿಎಚ್ ಪ್ರಕಾಶನ, ಪುಟ 308

ಮದುವೆಯಾಗಲು ಬಿಳಿಯ ಗಂಡಸರು ಸರ್ವಥಾ ಒಪ್ಪುವುದಿಲ್ಲ" [20] ಎಂದು ಹೇಳುತ್ತಾಳೆ. ಹೀಗೆ ಇಂದಿಗೂ ಅತಿ ಸೂಕ್ಷ್ಮವಾಗಿ ವರ್ಣಭೇದ ನಡೆಯುತ್ತಿದೆ ಎಂಬುದನ್ನು ಈ ಘಟನೆಯ ಮೂಲಕ ಎತ್ತಿ ಹಿಡಿದಿದ್ದಾರೆ. ನಮ್ಮಲ್ಲಿ ಹೇಗೆ ಮೇಲ್ಜಾತಿಯವರು ದಲಿತ ಮಹಿಳೆಯನ್ನು ದೈಹಿಕ ಸುಖಕ್ಕೆ ಬಳಸಿಕೊಳ್ಳಲೂ ಇಚ್ಛಿಸುತ್ತಾರೆ. ಆದರೆ ಮದುವೆಯಾಗಿ ಗೌರವಯುತವಾದ ಸ್ಥಾನ ನೀಡಲು ಹಿಂಜರಿಯುತ್ತಾರೋ ಹಾಗೇ ಕರಿಯರ ಮೇಲೆ ನಡೆದ ದೌರ್ಜನ್ಯವಷ್ಟೇ ಅಲ್ಲದೆ ಅಮೆರಿಕಾದ ಮೂಲ ನಿವಾಸಿಗಳ ಮೇಲೆ ನಡೆದಿರುವ ದೌರ್ಜನ್ಯಗಳನ್ನು ದ್ವಾರಕಾನಾಥರು ತಮ್ಮ ಪ್ರವಾಸ ಕಥನದಲ್ಲಿ ಚಿತ್ತರಿಸಿದ್ದಾರೆ. ಕ್ಯಾಲಿಫೋರ್ನಿಯಾ ಹಾಗೂ ಒಕ್ಲಹೋಮ ರಾಜ್ಯಗಳ ಭೇಟಿಗಳಲ್ಲಿ ಇದನ್ನು ನಾವು ಕಾಣಬಹುದು. ಕ್ಯಾಲಿಫೋರ್ನಿಯಾ ಭೇಟಿಯ ಬಗ್ಗೆ ತಿಳಿಸುತ್ತಾ 'ಇದು ಅಮೆರಿಕನ್ ಇಂಡಿಯನ್ ಮೂಲನಿವಾಸಿಗಳ ರಾಜ್ಯ. ಇಲ್ಲಿ ನೂರೈವತ್ತೂ ಹೆಚ್ಚು ಬುಡಕಟ್ಟಿನ ಜನರಿದ್ದರು. ಸಾವಿರಾರು ವರ್ಷಗಳಿಂದ ತಮ್ಮ ನೆಲದಲ್ಲಿ ಸಮೃದ್ಧರಾಗಿ ಜೀವಿಸುತ್ತಿದ್ದವರು 1850ರಲ್ಲಿ ಉಂಟಾದ ಗೋಲ್ಡ್‌ರಶ್‌ನಿಂದ ತೀವ್ರವಾಗಿ ಘಾಸಿಗೊಂಡರು. ಯುರೋಪಿಯನ್ನರು ಅದರಲ್ಲೂ ಸ್ಪಾನಿಷ್ಯರು ತಮ್ಮ ಆಧುನಿಕ ಶಸ್ತ್ರಾಸ್ತ್ರಗಳಿಂದ ತರಗೆಲೆಗಳಂತೆ ಹೊಡೆದುರುಳಿಸಿ, ಅವರ ಗುಡಿಸಲುಗಳಿಗೆ ಬೆಂಕಿ ಇಟ್ಟು ಗಂಡಸರು, ಹೆಂಗಸರು, ಮಕ್ಕಳ ಸಮೇತ ಸಾಮೂಹಿಕವಾಗಿ ಕೊಂದರು. ಹೆಂಗಸರ ಮಾನಭಂಗ ಮಾಡಿದರು. ಅನೇಕ ಹಳ್ಳಿಗಳು ಖಾಲಿಯಾದವು. ಬುಡಕಟ್ಟು ಜನರ ಬದುಕು ಬರ್ಬರವಾಯಿತು. "ದುರಂತವೆಂದರೆ ಆಗಿನ ಸರ್ಕಾರ ಈ ಮಾರಣ ಹೋಮವನ್ನು ನಡೆಸಿದವರನ್ನು 'ಹೀರೋ'ಗಳೆಂದು ಕೊಂಡಾಡಿತು!" ಎಂದಿದ್ದಾರೆ. ಕೊನೆಗೆ ಅನಿವಾರ್ಯವಾಗಿ ಅಮೆರಿಕನ್ ಇಂಡಿಯನ್‌ರು ಹೊಸಜನರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕಾಯಿತು. "ಈ ಎಲ್ಲಾ ಹಲ್ಲೆ, ಹಿಂಸಾಚಾರದ ನಡುವೆಯೂ ಅಮೆರಿಕನ್ ಇಂಡಿಯನ್ ಬುಡಕಟ್ಟಿನ ಟೊಲೋವಾ, ಯುರೋಕ್, ಹ್ಯೂಪ್ ಮತ್ತು ಕರುಕ್ ಎಂಬ ನಾಲ್ಕು ಬುಡಕಟ್ಟುಗಳು ಹೇಗೋ ಕಷ್ಟಪಟ್ಟು ತಮ್ಮ ಭಾಷೆ, ಸಂಸ್ಕೃತಿಯನ್ನು ಉಳಿಸಿಕೊಂಡು ಮುಂದಿನ ಪೀಳಿಗೆಗೂ ಅದನ್ನು ಧಾರೆಯೆರೆಯುತ್ತಾ ನಡೆದವು. ಆಶ್ಚರ್ಯವೆಂದರೆ ಈ ನೂರೈವತ್ತು ವರ್ಷಗಳಲ್ಲಿ ಈ ಭಾಷೆ, ಸಂಸ್ಕೃತಿ ಮತ್ತೆ ಹೊಸ ಹುರುಪಿನಿಂದ ಚಿಗುರೊಡೆಯಿತು. ಇಂದು ಇಲ್ಲಿನ ಬುಡಕಟ್ಟು ಜನ ಮುಖ್ಯವಾಹಿನಿಯಲ್ಲಿ ಕಲೆತು ಹೋಗಿದ್ದರೂ ತಮ್ಮ ಸಾಂಸ್ಕೃತಿಕ ಬೇರುಗಳನ್ನು ಕಳಕೊಳ್ಳದೆ ಉಳಿಸಿಕೊಂಡಿರುವುದು ನಿಜಕ್ಕೂ ಗ್ರೇಟ್" ಎಂದು ಶ್ಲಾಘಿಸಿದ್ದಾರೆ.

ಇದೇ ರೀತಿ ಅಮೆರಿಕಾ ಮೂಲ ನಿವಾಸಿಗಳಿರುವ ಒಕ್ಲಹೋಮ ಎಂಬ ರಾಜ್ಯಕ್ಕೆ ಹೋಗುತ್ತಾ ಅಮೆರಿಕಾ ಮೂಲ ನಿವಾಸಿಗಳಿಗೆ 'ರೆಡ್ ಇಂಡಿಯನ್' ಎಂದು ಕರೆಯಲು ಕಾರಣ, ವಲಸಿಗ ಯೂರೋಪಿಯನ್‌ರು ಬಂದ ನಂತರ ಹೇಗೆ ಇವರ ಬದುಕು ಬರ್ಬರವಾಯಿತು. ಯುರೋಪಿಯನ್‌ರ ತಂತ್ರ, ಕುತಂತ್ರ, ಶಸ್ತ್ರಾಸ್ತ್ರಗಳಿಂದಾಗಿ ಅಸಹಾಯಕರು, ಅಮಾಯಕರೂ

20. -ಅದೇ -ಪುಟ -115

ಆದ ರೆಡ್ ಇಂಡಿಯನ್‌ರು ತಮ್ಮ ಭೂಮಿಯಲ್ಲಿಯೇ ಜೀತದಾಳುಗಳಾಗಿ ದುಡಿಯುವಂತೆ ಮಾಡಿತು. ನಂತರ 20ನೇ ಶತಮಾನದಲ್ಲಿ 'ಅಮೆರಿಕನ್ ಇಂಡಿಯನ್ ಮೂವ್‌ಮೆಂಟ್' ಎಂಬ ಹೋರಾಟದ ಮೂಲಕ ಸಾಕಷ್ಟು ಸವಲತ್ತುಗಳನ್ನು ಪಡೆಯುವಲ್ಲಿ ಸಫಲವಾಗಿದ್ದನ್ನು ವಿವರಿಸುತ್ತಾರೆ. ಇಂದಿಗೂ ಇವರನ್ನು ಪರೋಕ್ಷವಾಗಿ ನಾಶಪಡಿಸುತ್ತಿದ್ದಾರೆಂದೂ ಅದಕ್ಕೆ ಅವರು ನೀಡುವ ಕಾರಣ ಟೆಕ್ಸಾಸ್ ಒಕ್ಲಹೋಮಗಿಂತಲೂ ದೊಡ್ಡ ರಾಜ್ಯವಾಗಿದ್ದರೂ ಅಲ್ಲಿ ಜೂಜಿನ ಕೇಂದ್ರವನ್ನು ತೆರೆಯಲು ಅನುಮತಿ ನೀಡದೆ ಈ ರಾಜ್ಯದಲ್ಲಿ ಜೂಜಿನ ಕೇಂದ್ರವನ್ನು ತೆರೆಯಲೂ ಅನುಮತಿ ನೀಡಲಾಗಿದೆ. ಇವರೆಲ್ಲಾ ಜೂಜಾಡಿ, ಕುಡಿದು, ಡ್ರಗ್ಸ್‌ಗೆ ಶರಣಾಗಿ ಹಾಳಾಗಲಿ ಎಂಬುದು ಅಮೆರಿಕದ ವರ ಭಾವವಿರಬಹುದು ಎಂದು ಹೇಳುತ್ತಾ "ಇಂದು ಇಂಡಿಯನ್ ಕಮ್ಯೂನಿಟಿ ಎಲ್ಲಾ ಕೆಟ್ಟ ಚಟಗಳಿಂದ ನಾಶವಾಗಿ ನೆಲಕಚ್ಚಿ ಹೋಗಿದೆ ಅಮೆರಿಕ ಸರ್ಕಾರ ಈ ಬುಡಕಟ್ಟು ಜನಾಂಗವನ್ನು ನಾಶಪಡಿಸುತ್ತಿರುವ ಪರಿ ಇದು [21] ಎಂದು ಬೇಸರ ವ್ಯಕ್ತಪಡಿಸಿದ್ದಾರೆ.

ಹೀಗೆ ತಮ್ಮ ಪ್ರವಾಸದುದ್ದಕ್ಕೂ ತಾವು ನೋಡಿದ ನಗರಗಳ, ಸ್ಮಾರಕ, ಕಟ್ಟಡ, ಚರ್ಚ್, ವಿಶ್ವವಿದ್ಯಾಲಯ, ಶಾಲೆ, ಕೋಟೆಗಳ ಹಿನ್ನಲೆ ಅಲ್ಲಿ ನಡೆದ ವರ್ಣಭೇದ, ಗುಲಾಮಗಿರಿ, ದೌರ್ಜನ್ಯಕ್ಕೆ ಒಳಗಾದ ಕರಿಯರ ಬವಣೆ, ಅದರ ವಿರುದ್ಧ ದನಿ ಎತ್ತಿ ನಡೆಸಿದ ಹೋರಾಟ, ಅದರಿಂದ ಕಂಡ ಯಶಸ್ಸು, ಇಂದಿಗೂ ಅತ್ಯಂತ ಸೂಕ್ಷ್ಮವಾಗಿ ನಡೆಯುವ ವರ್ಣಭೇದವನ್ನು ತಮ್ಮ ಪ್ರವಾಸ ಕಥನದಲ್ಲಿ ವರದಿ ಮಾಡುತ್ತಾ, ವರ್ಣಭೇದ ಹಾಗೂ ಅಸ್ಪೃಶ್ಯತೆಯ ನಡುವೆ ಇರುವ ಸಾಮ್ಯತೆ ಯನ್ನು ಗುರುತಿಸುತ್ತಾ ಅಮೆರಿಕಾ ಎಂದರೆ ವೈಭವಗಳ ದೇಶ ಅಲ್ಲಿಯ ವ್ಯವಸ್ಥೆ ಉತ್ತಮವೆಂದು ತಿಳಿದಿದ್ದವರಿಗೆ ಅಮೆರಿಕಾ ಹೀಗೂ ಇದೆ ಎಂದು ಅದರ ಮತ್ತೊಂದು ಮುಖದ ದರ್ಶನವನ್ನು ಮಾಡಿಸಿದ್ದಾರೆ.

**6.2 ಕಪ್ಪು ನಾಯಕರ ಸಾಧನೆ** : ದ್ವಾರಕಾನಾಥರ ಅಮೆರಿಕಾ ಆ ಮುಖ ಕೃತಿಯ ಮತ್ತೊಂದು ವಿಶೇಷವೆಂದರೆ ಸಂದರ್ಭೋಚಿತವಾಗಿ ಕರಿಯರು ಮಾಡಿದ ಸಾಧನೆಯನ್ನು ಎತ್ತಿ ಹಿಡಿಯುವುದು. ಇವರು ಬಾಲ್ಟಿಮೋರ್ ನಗರಕ್ಕೆ ಭೇಟಿ ಇತ್ತಾಗ ಆ ನಗರದವರೇ ಆದ 'ಫ್ರೆಡ್ರಿಕ್ ಡಗ್ಲಾಸ್' ಮತ್ತು ಥರ್‌ಗುಡ್ ಮಾರ್ಷಲ್‌ರಂತ ಕರಿಯ ಲೆಜೆಂಡ್‌ಗಳು ಹೇಗೆ ವರ್ಣಭೇದದ ವಿರುದ್ಧವಾಗಿ ಹೋರಾಡಿದರೆಂಬುದನ್ನು ಸ್ಮರಿಸುತ್ತಾರೆ. "ನಾವು ಈ ಕಪ್ಪು ಜನರ ಚರ್ಚ್‌ಗಳನ್ನು ಕಂಡು ಚಕಿತರಾಗುತ್ತಿದ್ದಂತೆಯೇ ನಮ್ಮನ್ನು ಈ ಬಾಲ್ಟಿಮೋರ್ ನಗರದ "ಫ್ರೆಡ್ರಿಕ್ ಡಗ್ಲಾಸ್" ಮತ್ತು "ಥರ್‌ಗುಡ್ ಮಾರ್ಷಲ್" ರಂಥ ಕರಿಯ 'ಲೆಜೆಂಡ್'ಗಳು ಸೆಳೆಯ ತೊಡಗಿದರು" ಎಂದು ಅವರ ಸಾಧನೆಯ ಎಳೆಯನ್ನು ಬಿಚ್ಚಿಡುತ್ತಾರೆ.

'ಫ್ರೆಡ್ರಿಕ್ ಡಗ್ಲಾಸ್' ಮೇರಿಲ್ಯಾಂಡ್ ರಾಜ್ಯದ ಗುಲಾಮರ ಕುಟುಂಬವೊಂದರಲ್ಲಿ

---

21. -ಅದೇ - ಪುಟ - 124

ಹುಟ್ಟಿದವನು ಈತ ಎಂಟು ವರ್ಷದವನಾಗಿರುವಾಗ ಬಾಲ್ಟಿಮೋರ್‌ಗೆ ಓಡಿ ಬಂದು ಫೆಲ್ಸ್ ಪಾಯಿಂಟ್ ಎಂಬ ಬಂದರಿನಲ್ಲಿ ಕೆಲಸಕ್ಕೆ ಸೇರುತ್ತಾನೆ. ಇಲ್ಲಿಯ ಕಾನೂನಿನ ಪ್ರಕಾರ ಗುಲಾಮರು ಹಾಗೂ ಅವರ ಮಕ್ಕಳು ಓದು ಬರಹ ಕಲಿಯುವಂತಿರಲಿಲ್ಲವಾದರಿಂದ ಈತ ತನ್ನಷ್ಟಕ್ಕೆ ತಾನೇ ಏಕಲವ್ಯನಂತೆ ಕದ್ದು ಮುಚ್ಚಿ ಓದಲು ಬರೆಯಲು ಕಲಿತು ನಂತರ ಗುಲಾಮಗಿರಿ ಅಳಿಸಿ ಹಾಕುವ ಚಳುವಳಿಯ ಪ್ರಮುಖ ನಾಯಕನಾಗಿ ಬೆಳೆಯುತ್ತಾನೆ, ಅಷ್ಟೇ ಅಲ್ಲದೇ ಅಮೆರಿಕದ ಶ್ರೇಷ್ಠ ಚಿಂತಕ, ಬರಹಗಾರ, ಪ್ರಕಾಶಕನಾಗಿ, ಅಬ್ರಹಾಂ ಲಿಂಕನ್‌ಗೆ ಸಲಹೆಗಾರನಾಗಿ ರೂಪು ಗೊಳ್ಳುತ್ತಾನೆ. [1]

ಇಲ್ಲಿ ಡಗ್ಲಾಸ್‌ನ ಸಾಧನೆಯನ್ನು ಏಕಲವ್ಯನೊಂದಿಗೆ ಸಮೀಕರಿಸಿದ್ದಾರೆ. ಏಕಲವ್ಯನೂ ಹಿಂದುಳಿದ ಜನಾಂಗಕ್ಕೆ ಸೇರಿದವನು. ದ್ರೋಣರಿಂದ ನೀಚ ಜಾತಿಗೆ ಸೇರಿದವನಾಗಿದ್ದರಿಂದ ವಿದ್ಯೆ ಕಲಿಸಲಾಗುವುದಿಲ್ಲವೆಂದು ದೂರ ತಳ್ಳಲ್ಪಟ್ಟವನು. ಅದೇ ರೀತಿ ಡಗ್ಲಾಸ್ ಕೂಡ ವ್ಯವಸ್ಥೆಯ ಕಾರಣ ಮನುಷ್ಯನ ಸ್ವಾಭಾವಿಕ ಹಕ್ಕುಗಳಿಂದ ವಂಚಿಸಲ್ಪಟ್ಟವನು. ಏಕಲವ್ಯ ಹೇಗೆ ಕದ್ದು ಮುಚ್ಚಿ ಬಿಲ್ವಿದ್ಯೆಯನ್ನು ಕಲಿತನೋ ಅದೇ ರೀತಿ ಡಗ್ಲಾಸ್ ಕೂಡ ಕದ್ದು ಮುಚ್ಚಿ ವಿದ್ಯೆ ಕಲಿತು ತಮ್ಮ ಹಕ್ಕುಗಳಿಗಾಗಿ ಹೋರಾಟವನ್ನು ಮಾಡಿದ ವ್ಯಕ್ತಿ. ಇಲ್ಲಿ ಈ ಹೋಲಿಕೆ ಸಮರ್ಥನೀಯವೆನಿಸುತ್ತದೆ.

ಇನ್ನು ಇದೇ ನಗರದವನಾದ 'ಥರ್‌ಗುಡ್ ಮಾರ್ಷಲ್'ನ ಸಾಧನೆಯನ್ನು ಇಲ್ಲಿ ಹೇಳಿದ್ದಾರೆ. 'ಡಗ್ಲಾಸ್ ಹುಟ್ಟು ಹಾಕಿದ ಗುಲಾಮಗಿರಿ ಅಳಿಸಿ ಹಾಕುವ ಚಳುವಳಿಯನ್ನು ಆತನ ನಂತರ ಥಲ್‌ಗುಡ್ ಮಾರ್ಷಲ್ ಮುಂದುವರೆಸಿ ಕೊಂಡು ಹೋಗುತ್ತಾನೆ. ಸಂವಿಧಾನದಲ್ಲಿ ಗುಲಾಮಗಿರಿ ಯನ್ನು ಅಳಲಿಸಿ ಹಾಕಿದ್ದರು. ಕರಿಯರು ಬಿಳಿಯರ ಶಾಲೆಗಳಿಗೆ ಹೋಗುವಂತಿರಲಿಲ್ಲ. ಇದರ ವಿರುದ್ಧವಾಗಿ ಸುಪ್ರೀಂಕೋರ್ಟಿನಲ್ಲಿ ದಾವೆಯನ್ನು ಹೂಡಿ ಅದ್ಭುತವಾಗಿ ವಾದ ಮಂಡಿಸಿ ಗೆಲುವನ್ನು ಸಾಧಿಸುತ್ತಾನೆ, ಥಲ್‌ಗುಡ್ ಮಾರ್ಷಲ್, ಅಷ್ಟೇ ಅಲ್ಲದೇ ಈತ 1967ರಲ್ಲಿ ಅಮೆರಿಕದ ಸುಪ್ರೀಂಕೋರ್ಟಿಗೆ ಮೊದಲ ಆಫ್ರಿಕನ್ ಅಮೆರಿಕನ್ ನ್ಯಾಯಾಧೀಶನಾಗಿ ನೇಮಕಗೊಂಡು ದೇಶದ ಹಲವಾರು ಸಾಮಾಜಿಕ ದಾವೆಗಳಲ್ಲಿ ಜನಪರ ತೀರ್ಪು ನೀಡುತ್ತಾನೆ. [2] ಹೀಗೆ ಬಾಲ್ಟಿ ಮೋರ್ ನಗರದ ವೈಶಿಷ್ಟ್ಯತೆ ಸ್ಮಾರಕಗಳು, ವಿಶ್ವವಿದ್ಯಾಲಯಗಳು ಅಲ್ಲಿ ನಡೆದ ಕರಿಯರ ಹೋರಾಟಗಳನ್ನು ಹೇಳುವುದರ ಜೊತೆಗೆ ಕರಿಯ ಲಿಜೆಂಡ್‌ಗಳ ಸಾಧನೆಯನ್ನು ಹೇಳುವ ಹೆಚ್ಚುಗಾರಿಕೆಯನ್ನು ಇಲ್ಲಿ ಕಾಣಬಹುದು.

ಅಮೆರಿಕಾದ ರಾಜಧಾನಿ ವಾಷಿಂಗ್‌ಟನ್‌ಗೆ ಭೇಟಿ ಇಟ್ಟಾಗಲೂ ಆ ನಗರದ ಸೌಂದರ್ಯ ವನ್ನಾಗಲಿ ಅಲ್ಲಿರುವ ಎತ್ತರೆತ್ತರ ಗಗನಚುಂಬಿ ಕಟ್ಟಡಗಳ ಬಗ್ಗೆಯಾಗಲಿ ತಿಳಿಸುವುದಿಲ್ಲ. ಶ್ವೇತಭವನದ ಮುಂದೆ ಬಂದಾಗಲೂ ಒಂದು ರೀತಿಯ ನಿರ್ಲಿಪ್ತತೆಯನ್ನು ತೋರಿಸುತ್ತಾರೆ.

1. -ಅದೇ -ಪುಟ- 25

2. -ಅದೇ- ಪುಟ- 25 ರಿಂದ 26

ವಾಷಿಂಗ್‌ಟನ್‌ನ ಮ್ಯೂಸಿಯಂ, ವೈಮಾನಿಕ ಅವಶೇಷಗಳನ್ನಿಟ್ಟ ಕೇಂದ್ರಗಳು ಇವರಲ್ಲಿ ಯಾವುದೇ ರೀತಿಯ ಕುತೂಹಲ ಹುಟ್ಟಿಸಲಿಲ್ಲ. ವಾಷಿಂಗ್‌ಟನ್ ಎಂಬ ಹೆಸರು ಕೇಳಿದಾಕ್ಷಣ ಇವರ ಮನಸ್ಸು ಕೇಂದ್ರೀಕರಿಸಿದ್ದು ಇವರ ಪ್ರೀತಿಯ ಕರಿಯ ವಿಜ್ಞಾನಿ ಜಾರ್ಜ್ ವಾಷಿಂಗ್ಟನ್ ಕಾರ್ವಾರ್‌ನಲ್ಲಿ. ವಾಷಿಂಗ್‌ಟನ್ ನಗರಕ್ಕೂ ಜಾರ್ಜ್ ವಾಷಿಂಗ್‌ಟನ್ ಕಾರ್ವಾರ್‌ಗೂ ಯಾವುದೇ ಸಂಬಂಧ ವಿಲ್ಲದಿದ್ದರೂ ವಾಷಿಂಗ್‌ಟನ್ ಹೆಸರು ಕೇಳಿದಾಕ್ಷಣ ಇವರಿಗೆ ನೆನಪಾದದ್ದು ಮಾತ್ರ ಜಾರ್ಜ್ ವಾಷಿಂಗ್‌ಟನ್ ಕಾರ್ವಾಲ್ ಎಂಬ ಕರಿಯ ವಿಜ್ಞಾನಿಯ ಸಾಧನೆ. ವಾಷಿಂಗ್‌ಟನ್ ನಗರದ ಸೌಂದರ್ಯದ, ವೀಕ್ಷಣಾ ಸ್ಥಳದ ಬದಲು ಅವರು ವಿವರಿಸುತ್ತಾ ಹೋಗುವುದು ಜಾರ್ಜ್ ವಾಷಿಂಗ್‌ಟನ್ ಕಾರ್ವಾಲ್‌ನ ಯಶೋಗಾಥೆಯನ್ನು, ನಿರ್ಜೀವ ಕಟ್ಟಡಗಳ ಸೌಂದರ್ಯಕ್ಕಿಂತಲೂ ಒಬ್ಬ ಕರಿಯ ಮನುಷ್ಯ ಸಾಧಿಸಿ ಕಟ್ಟಿದ ಸಾಧನೆಯ ಸೌಧವನ್ನು ವರ್ಣಿಸುವುದೇ ದ್ವಾರಕಾನಾಥರಿಗೆ ಮುಖ್ಯ ಎನಿಸುತ್ತದೆ.

'1864ರಲ್ಲಿ ಜಾರ್ಜ್ ವಾಷಿಂಗ್‌ಟನ್ ಗುಲಾಮ ಕುಟುಂಬವೊಂದರಲ್ಲಿ ಹುಟ್ಟುತ್ತಾನೆ. ಈತ ಇನ್ನೂ ಪುಟ್ಟ ಮಗುವಾಗಿರುವಾಗಲೇ ಈತನ ತಾಯಿ ಮೇರಿಯೊಂದಿಗೆ ಮಿಸೌರಿ ರಾಜ್ಯದ ಕಾರ್ವಾರ ಎಂಬ ರೈತ ಕುಟುಂಬಕ್ಕೆ ಮಾರಲಾಗುತ್ತದೆ. ಕೆಲ ದಿನಗಳ ನಂತರ ಈತನ ತಾಯಿಯನ್ನು ಅಂತರ್ಯುದ್ಧ ನಡೆಸುತ್ತಿದ್ದ ಸೈನಿಕರು ಅಪಹರಿಸಿಕೊಂಡು ಹೋಗುತ್ತಾರೆ. ಈ ಘಟನೆಯಿಂದ ಈತ ಕಾಯಂ ಆಗಿ ತನ್ನ ತಾಯಿಯನ್ನು ಕಳೆದುಕೊಳ್ಳುತ್ತಾನೆ. 13ನೇ ವಯಸ್ಸಿನವರೆಗೂ ತನ್ನ ಒಡೆಯರ ಆಶ್ರಮದಲ್ಲಿ ಬೆಳೆಯುತ್ತಾನೆ. ನಂತರ ಕಾನ್ಸಾಸ್ ಎಂಬ ರಾಜ್ಯಕ್ಕೆ ತೆರಳಿ ಅಲ್ಲಿ ಹೋಟೆಲ್, ಲಾಂಡ್ರಿಗಳಲ್ಲಿ ಕೆಲಸ ಮಾಡುತ್ತಾ ಶಾಲೆಗೆ ಸೇರುತ್ತಾನೆ. ಮೂರು ವರ್ಷಗಳ ನಂತರ ಹಲವು ರಾಜ್ಯಗಳಲ್ಲಿ ಅಲೆಮಾರಿಯಂತೆ ಓಡಾಡುತ್ತಾ ತನ್ನ ಹೊಟ್ಟೆಪಾಡಿಗೆ ನಾನಾ ಕೆಲಸ ಮಾಡಿಕೊಂಡಿರುತ್ತಾನೆ. ಹೀಗೆ ಅಲೆದಾಡಿ ಕೊಂಡಿರುವಾಗ ಆತನಿಗೆ ವೈವಿಧ್ಯಮಯ ಗಿಡ, ಮರ, ಪ್ರಾಣಿ ಸಂಕುಲದ ಬಗ್ಗೆ ತಿಳಿದುಕೊಳ್ಳುವ ಹಾಗೂ ಆ ವಿವರಗಳನ್ನು ಬರೆದಿಟ್ಟುಕೊಳ್ಳುವ ಹವ್ಯಾಸ ಬೆಳೆಯುತ್ತದೆ. ನಂತರ ಮಾಜಿ ಗುಲಾಮರ ಕುಟುಂಬವೊಂದರ ಪರಿಚಯವಾಗಿ ಅವರ ಸಹಾಯದಿಂದ ಹೈಸ್ಕೂಲು ಪಾಸ್ ಮಾಡಿ ಕಾನ್ಸ್‌ಸ್ ರಾಜ್ಯದಲ್ಲಿಯ ಕಾಲೇಜೊಂದಕ್ಕೆ ಸೇರಲು ಅರ್ಜಿಯನ್ನು ಹಾಕುತ್ತಾನೆ. ಈತನ ಆಸಕ್ತಿ ಮತ್ತು ಹವ್ಯಾಸಗಳನ್ನು ನೋಡಿದ ಕಾಲೇಜು ಈತನಿಗೆ ಪ್ರವೇಶ ಪತ್ರವನ್ನು ಕಳುಹಿಸಿಕೊಡುತ್ತದೆ. ಆದರೆ ಈತ ಸಂತೋಷದಿಂದ ಕಾಲೇಜು ಸೇರಲು ಬಂದಾಗ ಕರಿಯನೆಂಬ ಒಂದೇ ಒಂದು ಕಾರಣಕ್ಕೆ ಆತನ ಪ್ರವೇಶವನ್ನು ನಿರಾಕರಿಸುತ್ತದೆ. ಇದರಿಂದ ನಿರಾಶನಾಗುತ್ತಾನಾದರೂ ಎದೆಗುಂದದೆ ಹಳ್ಳಿಯೊಂದರಲ್ಲಿ ವ್ಯವಸಾಯವನ್ನು ಮಾಡುತ್ತಾ ನಿಸರ್ಗದ ಕೌತುಕಗಳನ್ನು ಅಭ್ಯಸಿಸುತ್ತಾನೆ. ಮುಂದೆ ಜಾರ್ಜ್ ಕಾರ್ವಾರ್ ಅಯೋವಾ ಸ್ಟೇಟ್ ವಿವಿಯ ಕೃಷಿ ಕಾಲೇಜು ಸೇರಿಕೊಂಡು ಅದೇ ಕಾಲೇಜಿನ ಪ್ರಪ್ರಥಮ ಆಫ್ರಿಕನ್ ಅಮೆರಿಕನ್ ಉಪಾಧ್ಯಾಯನಾಗಿ ಬೆಳೆಯುತ್ತಾನೆ, ನಂತರ

ಬೋಧನೆ ಮತ್ತು ಸಂಶೋಧನೆಯ ಗುರಿ ಇಟ್ಟುಕೊಂಡ, ಕೇವಲ ಕರಿಯರಿಗಾಗಿ ಆರಂಭವಾದ ಟ್ರಸ್ಟ್‌ಗೀ ಸಂಸ್ಥೆ ಸೇರಿ 50 ವರ್ಷಗಳ ಕಾಲ ಆ ಸಂಸ್ಥೆಯ ಸೇವೆ ಮಾಡಿ ಪ್ರಖ್ಯಾತ ವಿಜ್ಞಾನಿಯಾಗುತ್ತಾನೆ. ಈತ ಪ್ರಖ್ಯಾತನಾದ ಮೇಲೆ ಥಾಮಸ್ ಆಲ್ವ ಎಡಿಸನ್ ಈತನನ್ನು ಅಮೆರಿಕದ ನ್ಯೂಜೆರ್ಸಿ ರಾಜ್ಯದಲ್ಲಿ ತೆರೆದ ತನ್ನ ಅತ್ಯಾಧುನಿಕ ಪ್ರಯೋಗಾಲಯಕ್ಕೆ ಹೆಚ್ಚಿನ ಸಂಬಳ ನೀಡುವುದಾಗಿ ಆಹ್ವಾನಿಸಿದರೂ ಅದನ್ನು ನಮ್ರವಾಗಿ ತಿರಸ್ಕರಿಸುತ್ತಾನೆ. [3]

ಹೀಗೆ ಪ್ರತಿಭೆ ಇದ್ದರೂ ಕರಿಯನೆಂಬ ಒಂದೇ ಕಾರಣದಿಂದ ಆತನ ಕಾಲೇಜಿನ ಪ್ರವೇಶವನ್ನು ನಿರಾಕರಿಸಿದರೂ ಎದೆಗುಂದದೆ ತನ್ನ ಗುರಿಯನ್ನು ಸಾಧಿಸುವ ಕೌತುಕವನ್ನುಂಟು ಮಾಡುವ ಕಾರ್ವಾರ್‌ನ ಜೀವನ ಕತೆ ಹಿತವೆನಿಸುತ್ತದೆ. ಯಾವ ಬಿಳಿಯ ಜನರು ಆತನನ್ನು ದೂರ ತಳ್ಳಿದರೋ ಅದೇ ಬಿಳಿಯ ಜನ ಆತನ ಸಾಧನೆಯನ್ನು ಗುರುತಿಸಿ ಹತ್ತಿರ ಕರೆಯುವಂತೆ ಮಾಡಿದ್ದು ನಿಜಕ್ಕೂ ಶ್ಲಾಘನೀಯ. ತನ್ನ ಮೇಧಾವಿತನ, ಶ್ರಮ, ವಿನಯವಂತಿಕೆ ಹಾಗೂ ಸಂಶೋಧನಾ ಸಾಮರ್ಥ್ಯಗಳಿಂದ ಇಡೀ ಅಮೆರಿಕಾಗೆ ಬೇಕಾದನಾಗಿ ಬೆಳೆದದ್ದು ಅದ್ಭುತ ವೆನಿಸುತ್ತದೆ. ವಿದ್ಯೆಗೆ ಯಾವುದೇ ಬಣ್ಣವಾಗಲಿ, ಜಾತಿಯಾಗಲಿ ಮುಖ್ಯವಾಗದೇ ವ್ಯಕ್ತಿಯಲ್ಲಿರುವ ಪ್ರತಿಭೆ ಮುಖ್ಯವಾಗುತ್ತದೆ ಎಂದು ತಿಳಿದಿದ್ದರೂ ಇಂತಹ ಘಟನೆಗಳು ವಿಶ್ವದಾದ್ಯಂತ ನಡೆಯುತ್ತಲೇ ಇರುತ್ತವೆ. ಇಂತ ಎಲ್ಲಾ ದೌರ್ಜನ್ಯ, ದಬ್ಬಾಳಿಕೆಗಳನ್ನು ಮೆಟ್ಟಿ ನಿಂತು ಪ್ರವರ್ಧಮಾನಕ್ಕೆ ಬಂದು ತನ್ನ ಕೊಡುಗೆಯನ್ನು ವಿಶ್ವಕ್ಕೆ ನೀಡಿದ ಜಾರ್ಜ್ ವಾಷಿಂಗ್ಟನ್ ಕಾರ್ವಾರ್‌ನ ಕತೆಯನ್ನು ಅಪ್ರಸ್ತುತವೆನಿಸಿದರು. ಪ್ರಸ್ತುತವಾಗುವಂತೆ ದ್ವಾರಕಾನಾಥರು ತಮ್ಮ ಕಥನದಲ್ಲಿ ಚಿತ್ರಿಸಿದ್ದು, ಅವರ ದೃಷ್ಟಿ ಕೋನಕ್ಕೆ ಸಾಕ್ಷಿಯಾಗಿದೆ.

ದ್ವಾರಕಾನಾಥರು ಶಿಕಾಗೋ ನಗರಕ್ಕೆ ಹೋದಾಗ ಅಲ್ಲಿ ಇವರ ಸ್ನೇಹಿತ ರೆಡ್ಡಿ ಅಮೃತಶಿಲೆಯ ಭಾರೀ ಕಟ್ಟಡವೊಂದನ್ನು ತೋರಿಸಿ ಅದು ಓಪ್ರಾವಿನ್‌ಫ್ರೇಯ ಮನೆ ಸ್ಟುಡಿಯೋ ಎಂದು ತೋರಿಸುತ್ತಾರೆ. ಓಪ್ರಾರ ಹೆಸರನ್ನು ಕೇಳಿ ರೋಮಾಂಚಿತರಾಗಿ "ಸ್ಟಾರ್ ವರ್ಲ್ಡ್ ಚಾನೆಲ್‌ನಲ್ಲಿ ವಾರಕ್ಕೊಮ್ಮೆ ಕಾದು ಕೂತು ನೋಡುವ ಓಪ್ರಾ ಎಂಬ ಕಪ್ಪು ಧಡೂತಿ ಹೆಂಗಸಿನ ತುಂಟತನ ತುಂಬಿದ ಗಂಭೀರ ಮಾತುಗಳನ್ನು ಕೇಳುವುದೇ ಚೆಂದ" ಎಂದು ಪ್ರತಿಕ್ರಿಯಿಸುತ್ತಾ ಇಂದು ಖ್ಯಾತಿಯ ಶಿಖರವನ್ನೇರುವ ಕಪ್ಪು ಹೆಣ್ಣುಮಗಳಾದ ಓಪ್ರಾವಿನ್‌ಫ್ರೆಯ ದಂತಕತೆಯನ್ನು ಹೇಳುತ್ತಾ ಮುನ್ನಡೆಯುತ್ತಾರೆ. 'ಓಪ್ರಾವಿನ್‌ಫ್ರೇ ಅಮೆರಿಕದ ಮಿಸ್ಸಿಸಿಪ್ಪಿಯಲ್ಲಿ ಹುಟ್ಟಿದವಳು. ಆಕೆಯ ತಾಯಿ ಅದೇ ರಾಜ್ಯದ ಬಿಳಿಯನೊಬ್ಬನ ಮನೆಯಲ್ಲಿ ಕೆಲಸಕ್ಕಿರುತ್ತಾಳೆ. ಓಪ್ರಾಗೆ ಮೂರು ವರ್ಷ ತುಂಬುವಷ್ಟರಲ್ಲಿ ಅವಳ ತಾಯಿ ಮಗುವನ್ನು ಅಜ್ಜಿಯ ಸುಪರ್ದಿಗೆ ಬಿಟ್ಟು ಮಿಲ್ವಾಕಿ ರಾಜ್ಯಕ್ಕೆ ವಲಸೆ ಹೋಗುತ್ತಾಳೆ. ನಂತರ ಹೇಗೋ ತಾಯಿಯನ್ನು ಸೇರಿಕೊಳ್ಳುವ ಓಪ್ರಾ ಹದಿಮೂರು ವರ್ಷ ತುಂಬುವುದರೊಳಗೆ ಅನೇಕ ಸಲ ತನ್ನ ಮಾವ ಮತ್ತಿತರ ಸಂಬಂಧಿಕರಿಂದ ಲೈಂಗಿಕ

3. -ಅದೇ-ಪುಟ - 29 ರಿಂದ 30

ಕಿರುಕುಳಕ್ಕೊಳಗಾಗುತ್ತಾಳೆ. ಆ ದೌರ್ಜನ್ಯ, ಹಿಂಸೆಯನ್ನು ತಾಳಲಾರದೆ ಮನೆ ಬಿಟ್ಟು ಓಡಿ ಬಂದು ಎಲ್ಲೂ ನೆಲೆಸಿಗದಿದ್ದಾಗ ತಂದೆಯ ಮನೆಯನ್ನು ಸೇರಿಕೊಳ್ಳುತ್ತಾಳೆ. ತಂದೆ ಅವಳಿಗೆ ಶಿಸ್ತಿನ ಜೀವನವನ್ನು ಕಲಿಸುತ್ತಾನೆ. 17ನೇ ವಯಸ್ಸಿನಲ್ಲಿ ಆಕೆ ಸ್ಥಳೀಯ ರೇಡಿಯೋ ಸ್ಟೇಷನ್‌ನಲ್ಲಿ ವಾರ್ತಾ ಪ್ರಚಾರಕಿಯಾಗುತ್ತಾಳೆ. ಅಲ್ಲಿ ಕೆಲಸ ಮಾಡಿಕೊಂಡೆ ಉನ್ನತ ವ್ಯಾಸಂಗವನ್ನು ಮಾಡುತ್ತಾಳೆ. ನಂತರ ಬಾಲ್ಟಿಮೋಲ್‌ನ ಟಿವಿ ವಾಹಿನಿಯಲ್ಲಿ ಪ್ರಧಾನ ವರದಿಗಾರ್ತಿಯಾಗುತ್ತಾಳೆ. ಓಪ್ರಾ ಅದ್ಭುತ ಮಾತುಗಾರ್ತಿ ಹಾಗಾಗಿ ಚಿಕಾಗೋನಲ್ಲಿ ಇನ್ನೇನು ನಿಂತು ಹೋಗುವ ಹಂತದಲ್ಲಿದ್ದ ಎ. ಎಂ. ಚಿಕಾಗೋ ಎಂಬ ಕಾರ್ಯಕ್ರಮಕ್ಕೆ ಜೀವ ತುಂಬಿದಳು. 1986ರಲ್ಲಿ ಆಕೆ ನಡೆಸಿಕೊಡುತ್ತಿರುವ 'ಓಪ್ರಾವಿನ್‌ಫ್ರೇಶೋ' ಇಡೀ ಅಮೆರಿಕಾದಲ್ಲಿ ನಡೆಯೋ ಎಲ್ಲಾ ಟಾಕ್‌ಶೋ ಗಳನ್ನು ಹಿಂದಿಕ್ಕಿ ಮೊದಲಸ್ಥಾನಕ್ಕೇರಿತು. ಅಂದಿನಿಂದ ಇಂದಿನವರೆಗೂ ಓಪ್ರಾ ಅಮೆರಿಕಾದ ಟಾಕ್ ಶೋಗಳ ರಾಣಿ 1985 ರಲ್ಲಿ ಅಲ್ಕಾ ವಾಕರ್ ಬರೆದ ಕಾದಂಬರಿಯನ್ನಾಧರಿಸಿ 'ದಿ ಕಲರ್ ಪೀಪಲ್' ಎಂಬ ಚಿತ್ರವನ್ನು ನಿರ್ದೇಶಿಸಿ ಅದರಲ್ಲಿ 'ಸೋಫಿಯಾ' ಎಂಬ ಪಾತ್ರದಲ್ಲಿ ಅಭಿನಯಿಸಿದಳು. ಈ ಚಿತ್ರ ಕರಿಯರ ದುರಂತ ಬದುಕಿನ ಕಥೆಯುಳ್ಳದ್ದು.

ಇಂದು ಓಪ್ರಾ ತನ್ನದೆ ಆದ ಸಿನಿಮಾ ಮತ್ತು ಟಿವಿ ನಿರ್ಮಾಣ ಸಂಸ್ಥೆ ಹೊಂದಿದ್ದಾಳೆ. 1991ರಲ್ಲಿ ಅಮೆರಿಕದ ಸಮಾಜಕ್ಕೆ ತಾನು ಬಾಲ್ಯಾವಸ್ಥೆಯಲ್ಲಿ ಅನುಭವಿಸಿದ ಲೈಂಗಿಕ ಹಿಂಸೆಯನ್ನು ಪರಿಚಯ ಮಾಡಿಸಿದಳು. ತನ್ನಂತೆ ಮಕ್ಕಳನ್ನು ಲೈಂಗಿಕ ಹಿಂಸೆಗೆ ತೊಡಗಿಸುವ ವಿಕೃತ ಕಾಮಿಗಳ ರಾಷ್ಟ್ರೀಯ ಪಟ್ಟಿಯೊಂದನ್ನು ತಯಾರಿಸಬೇಕೆಂದು ಹೋರಾಟವನ್ನು ಮಾಡಿ ಅಂದಿನ ಅಧ್ಯಕ್ಷ ಬಿಲ್‌ಕ್ಲಿಂಟನ್‌ನಿಂದ ಓಪ್ರಾ ಬಿಲ್ಲಿಗೆ ಸಹಿ ಪಡೆದಳು. ಇದು ಇಂದು ವಿಕೃತ ಕಾಮಿಗಳನ್ನು ಹದ್ದು ಬಸ್ತಿನಲ್ಲಿಡಲು ಸಾಧ್ಯವಾಗಿದೆ. 52 ವರ್ಷದ ಓಪ್ರಾ ಬಿಲಿಯನ್ ಡಾಲರ್‌ಗಳ ಆದಾಯವಿರೋ ಕರಿಯ ಮಹಿಳೆ. ಇತ್ತೀಚೆಗೆ ಆಫ್ರಿಕಾದಲ್ಲಿ ಕಡುಬಡತನದಲ್ಲಿ ನಲುಗುತ್ತಿರುವ ಮಕ್ಕಳಿಗಾಗಿ ಅತ್ಯಂತ ಆಧುನಿಕ ಶಾಲೆಯನ್ನು ಆರಂಭಿಸಿದ್ದಾಳೆ. ಆ ಮಕ್ಕಳು ತನ್ನಂತೆ ಬೆಳೆಯಬೇಕೆಂಬ ಆಸೆ.[4]

ಹೀಗೆ ಶಿಕಾಗೋ ನಗರದಲ್ಲಿ ಇದ್ದ ಆಕೆಯ ಮನೆ, ಸ್ಟುಡಿಯೋವನ್ನು ನೋಡಿ ಒಬ್ಬ ಕಪ್ಪು ಮಹಿಳೆ ತಾನು ಅನುಭವಿಸಿದ ನೋವು, ತನ್ನ ಪ್ರತಿಭೆಯಿಂದ ಮೇಲೆ ಬಂದು ಟಾಕ್ ಶೋಗಳ ಅನಭಿಷಕ್ತ ರಾಣಿಯಾದದ್ದು ನಂತರ ತನ್ನಂತೆ ಲೈಂಗಿಕವಾಗಿ ಬಳಸಲ್ಪಡುವ ಮಕ್ಕಳ ಪರವಾಗಿ ಹೋರಾಡಿ 'ಓಪ್ರಾ ಬಿಲ್'ನ್ನು ತಯಾರಿಸುವಂತೆ ಮಾಡಿದ್ದಳು, ಹೀಗೆ ಆಕೆಯ ಜೀವನ ಸಾಧನೆಯನ್ನು ನಮ್ಮ ಮುಂದೆ ತೆರೆದಿಟ್ಟು ನಮ್ಮ ಮನಸ್ಸು ಮಿಡಿಯುವಂತೆ ಮಾಡಿದ್ದಾರೆ. ಓಪ್ರಾಳ ಜೀವನ ಕಥೆ ಹಾಗೂ ಸಾಧನೆಯನ್ನು ಗಮನಿಸಿದರೆ ನಮ್ಮಲ್ಲಿನ ದಲಿತ ಮಹಿಳೆಯರ ಸಾಧನೆಯ ನೆನಪಾಗುತ್ತದೆ. ಕ್ರಿ.ಶ. 1970ರ ನಂತರ ಶಿಕ್ಷಣ ಪಡೆದು ಸಾಧನೆಯ ಹಾದಿ ತುಳಿದ ದಲಿತ

---

4.- ಅದೇ- ಪುಟ -53 ರಿಂದ 54

ಮಹಿಳೆಯರ ಬಗ್ಗೆ ಡಾ. ಪ್ರಸಾದ್ ಸ್ವಾಮಿಯವರು "ಶಿಕ್ಷಣ ಪಡೆದ ದಲಿತ ಮಹಿಳೆ ತಾನು ನೆಲೆ ನಿಂತು, ಕುಟುಂಬವನ್ನು ಓರಣವಾಗಿರಿಸಿ, ಸಮುದಾಯದಲ್ಲಿ ಅಸ್ತಿತ್ವ ಪಡೆದು, ಸಮಾಜದಲ್ಲಿ ಗುರುತಿಸಿಕೊಂಡು ತನ್ನದೇ ಆದ ಅಸ್ಮಿತೆ ವ್ಯಕ್ತಿತ್ವ ದೃಢಪಡಿಸಲು ಪಟ್ಟ ಪಾಡು ಉಲ್ಲೇಖಾರ್ಹ" ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. [5]

ಸೌತ್ ಶಿಕಾಗೋದ ಗಲ್ಲಿಗಳನ್ನು ನೋಡುತ್ತಾ ಮತ್ತೊಮ್ಮೆ ಈ ನಗರಕ್ಕೆ ಬಿಳಿಯ ಯಜಮಾನರಿಂದ ತಪ್ಪಿಸಿಕೊಂಡು ತಮ್ಮ ಭವಿಷ್ಯಕ್ಕಾಗಿ ಬಂದಂತ ಕರಿಯರ 'ದಿ ಗ್ರೇಟ್ ಬ್ಲಾಕ್ ಮೈಗ್ರೇಷನ್' ನ ವಿಚಾರವನ್ನು ಲೇಖಕರು ತಿಳಿಸುತ್ತಾರೆ. 'ಇಲ್ಲಿಗೆ ವಲಸೆ ಬಂದ ಕರಿಯರು ಕಾರ್ಖಾನೆಗಳಲ್ಲಿ, ಸ್ಟೀಲ್ ಮಿಲ್ಲುಗಳಲ್ಲಿ ಸ್ಟಾಕ್ ಯಾರ್ಡುಗಳಲ್ಲಿ, ಕಸಾಯಿಖಾನೆಗಳಲ್ಲಿ ದುಡಿಯಲು ಆರಂಭಿಸಿದರು. ಅವರ ಜೀವನದಲ್ಲಿ ಅಂತ ಪ್ರಯೋಜನವೇನು ಆಗುವುದಿಲ್ಲ. ಲಕ್ಷಾಂತರ ಜನ ಒಟ್ಟಿಗೆ ಬಂದಿದ್ದರಿಂದ ಬಡತನ ರೇಖೆಗಿಂತಲೂ ಕೆಳಗಿದ್ದು ಜೀವನದುದ್ದಕ್ಕೂ ನರಕ ಯಾತನೆ ಅನುಭವಿಸುತ್ತಾರೆ. ತಮ್ಮ ನೋವುಗಳನ್ನು ಮರೆಯುವ ಸಲುವಾಗಿ ಸಂಗೀತದ ಮೊರೆ ಹೋಗುತ್ತಾರೆ. ಅವರುಗಳು ಹತ್ತಿ ಬಿಡಿಸುವಾಗ ಹಾಡುತ್ತಿದ್ದ ಶ್ರಮದ ಹಾಡುಗಳೇ ಶಿಕಾಗೋದ ಡಾನ್ಸ್ ಹಾಲ್‌ಗಳಲ್ಲಿ ಸುಶ್ರಾವ್ಯಸಂಗೀತವಾಗಿ ಜನರನ್ನು ತನ್ನೆಡೆಗೆ ಸೆಳೆದು ಬ್ಲೂಸ್ ಮತ್ತು ಜಾಝ್ ಎಂಬ ಸಂಗೀತಕ್ಕೆ ಹೊಸ ಚೈತನ್ಯವನ್ನು ನೀಡಿತು. [6] ಮಡ್ಡಿವಾಟರ್ಸ್, ಲೂಯಿಸ್ ಆರ್ಮ್‌ಸ್ಟ್ರಾಂಗ್, ಎಲ್ಲೀ ಡಿಕ್ಸನ್, ಮಹೇಲಿಯ ಜಾಕ್ಸನ್‌ರಂತ ಸಂಗೀತ ದಿಗ್ಗಜರು ಅರಳಿದ್ದನ್ನು ನೆನಪಿಸಿಕೊಳ್ಳುತ್ತಾ ಭಾವುಕರಾಗಿ ಲೇಖಕರು "ಈ ಕಪ್ಪು ಜನರ ಕಂಠ ಎಷ್ಟೊಂದು ಕೋಗಿಲೆಗಳು ನಲಿಯುತ್ತವೆ" ಎಂದಿದ್ದಾರೆ. ಇದು ನಮ್ಮ ಜನಪದ ಹಾಡುಗಾರರನ್ನು ನೆನಪಿಗೆ ತರಿಸುತ್ತದೆ. ನಮ್ಮಲ್ಲಿಯೂ ಜಾನಪದ ಹಾಡುಗಳು ಹುಟ್ಟಿದ್ದೇ ಹಿಂದುಳಿದ ಜನಾಂಗದವರ ಕಂಠ ಸಿರಿಯಲ್ಲಿ.

ಹೀಗೆ ದ್ವಾರಕಾನಾಥರು ತಮ್ಮ ಪ್ರವಾಸ ಕಥನವನ್ನು ನೋಡಿದ ಸ್ಥಳಗಳು ಹಾಗೂ ಕರಿಯರ ಹೋರಾಟದ ಹಿನ್ನಲೆಯನ್ನು ಹೇಳುವುದಕ್ಕಷ್ಟೇ ಸೀಮಿತಗೊಳಿಸದೇ ಅವಕಾಶ ದೊರೆತಾಗಲೆಲ್ಲಾ ಕರಿಯ ನಾಯಕರ ಸಾಧನೆ, ಅವರ ಜೀವನವನ್ನು ತಿಳಿಸುತ್ತಾ ತಾವು ಭಾವುಕರಾಗುವುದಷ್ಟೇ ಅಲ್ಲದೆ ನಮ್ಮನ್ನೂ ಭಾವುಕ ಪ್ರಪಂಚಕ್ಕೆ ಕರೆದೊಯ್ಯುತ್ತಾರೆ.

**6.3 ಭಾರತದೊಂದಿಗಿನ ಹೋಲಿಕೆ** : ನಾವು ನಮ್ಮದಲ್ಲದ ದೇಶಕ್ಕೆ ಹೋದಾಗ ಸಹಜವಾಗಿಯೇ ನಮ್ಮ ದೇಶೀಯ ಮನಸ್ಸು ಜಾಗೃತಗೊಂಡಿರುತ್ತದೆ. ಅಲ್ಲಿ ಜರುಗುವ ಪ್ರತಿಯೊಂದು ಘಟನೆಗಳನ್ನು ನಮ್ಮ ದೇಶದೊಂದಿಗೆ ಜನಗಳೊಂದಿಗೆ ಹೋಲಿಸಿ ಕೊಂಡು ನಮ್ಮದೇ ಉತ್ತಮವೆಂದೋ ಅಥವಾ ಅವರದೇ ನಮ್ಮದಕ್ಕಿಂತ ಉತ್ತಮವೆಂದು ಹೇಳುವುದು ಮನುಷ್ಯನ ಸಹಜ ಗುಣ, ಇಂತ

---

5. ಡಾ. ಪ್ರಸಾದ ಸ್ವಾಮಿ, ಅಸ್ಮಿತೆ, ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಬೆಂ.

6. ಅದೇ ಪುಟ 66ರಿಂದ 67

ಹೋಲಿಕೆಗಳು ದ್ವಾರಕಾನಾಥರ 'ಅಮೆರಿಕ ಆ ಮುಖ' ಪ್ರವಾಸ ಕಥನದಲ್ಲಿ ಬಂದಿದೆ. ಈ ಹೋಲಿಕೆಗಳು ನಮ್ಮದನ್ನು ಅಲ್ಲಗಳೆಯುವ ಹೋಲಿಕೆಗಳಾಗದೇ ಮಾರ್ಮಿಕವಾದ ಹೋಲಿಕೆಗಳಾಗಿರುವುದು ಒಂದು ವಿಶೇಷ.

ದ್ವಾರಕಾನಾಥರು ನಯಾಗಾರ ಫಾಲ್ಸ್‌ನ್ನು ನೋಡಲು ಹೋದಾಗ, ಅಲ್ಲಿ ನಯಾಗಾರ ಫಾಲ್ಸ್ ಅಮೆರಿಕ ಮತ್ತು ಕೆನಡಗಳೆರಡು ದೇಶಗಳಲ್ಲಿ ಹಂಚಿ ಹೋಗಿದೆ. ಅಮೆರಿಕದಲ್ಲಿ ಧುಮ್ಮಿಕ್ಕುವ ಜಲಪಾತಕ್ಕೆ ಅಮೆರಿಕನ್ ಫಾಲ್ಸ್ ಎಂದು ಕೆನಡದಲ್ಲಿ ಧುಮ್ಮಿಕ್ಕುವ ಜಲಪಾತಕ್ಕೆ ಕೆನಡಿಯನ್ ಫಾಲ್ಸ್ ಎಂದು ಕರೆಯಲಾಗುತ್ತದೆ. ಅಮೆರಿಕನ್ ಫಾಲ್ಸ್‌ನ ದಂಡೆಯಲ್ಲಿ ನಿಂತರೆ ಕೆನಡಾದ ಫಾಲ್ಸ್ ಕೂಡ ನೋಡಬಹುದು. ಎಂದು ಹೇಳುತ್ತಾ "ಅಮೆರಿಕ ಕೆನಡ ನಮ್ಮ ಭಾರತ ಪಾಕಿಸ್ತಾನದಂತೆ ಅಕ್ಕಪಕ್ಕದ ದೇಶಗಳು ಅಮೆರಿಕದ ಕಡೆಯಿಂದ ಕೆನಡಾದ ಟೊರೆಂಟೋಗೆ ನಡೆಯಲೂ ಒಂದು ಸೇತುವೆಯಿದೆ. ಆದರೆ, ಭಾರತದಿಂದ ಪಾಕಿಸ್ತಾನಕ್ಕೆ ನಡೆಯಲು ಒಂದು ಕಲ್ಪನಾ ಗೋಡೆಯಿದೆ. ಇದಿಷ್ಟೇ ವ್ಯತ್ಯಾಸ!" [1] ಎಂದು ಮಾರ್ಮಿಕವಾಗಿ ನುಡಿದಿದ್ದಾರೆ. ಅಮೆರಿಕ ಕೆನಡ ಅಕ್ಕಪಕ್ಕದ ದೇಶವಾಗಿದ್ದುಕೊಂಡು ಎಂತ ಒಳ್ಳೆಯ ಬಾಂಧವ್ಯವನ್ನು ಹೊಂದಿದೆ. ಅಮೆರಿಕಾದಿಂದ ಕೆನಡಾಕ್ಕೆ ಹೋಗಲು ನಡುವೆ ಇರುವ ಸೇತುವೆಯನ್ನು ಹಾದುಹೋದರೆ ಸಾಕು, ಆದರೆ ಭಾರತದಿಂದ ಪಾಕಿಸ್ತಾನಕ್ಕೆ ಹೋಗಲು ಇಷ್ಟು ಸುಲಭದ ಮಾರ್ಗವಿಲ್ಲ. ನಮ್ಮ ಬಾಂಧವ್ಯವು ಅಮೆರಿಕಾ ಕೆನಡಾದಂತಿದ್ದರೆ ಚೆನ್ನ ಎಂಬುದು ಅವರ ಮಾತುಗಳಲ್ಲಿ ವ್ಯಕ್ತವಾಗಿದೆ.

19ನೇ ಶತಮಾನದಲ್ಲಿ ಅಮೆರಿಕಾದಲ್ಲಿ ಕರಿಯರು ಜೀತಮುಕ್ತರಾಗಲು ಅಂಡರ್‌ಗ್ರೌಂಡ್ ರೈಲ್ವೆ ವ್ಯವಸ್ಥೆಯನ್ನು ಬಳಸುತ್ತಾರೆ. ಈ ವ್ಯವಸ್ಥೆಯ ಮೂಲಕ ಲಕ್ಷಾಂತರ ಕರಿಯರು ಸ್ವತಂತ್ರರಾಗುತ್ತಾರೆ. ಇಂತ ವ್ಯವಸ್ಥೆಯ ಕೊಂಡಿಗಳಾಗಿದ್ದು ಬಾಲ್ಟಿಮೋರ್, ಫಿಲಡೆಲ್ಫಿ, ಹ್ಯಾಲಿಸ್‌ಬರ್ಗ್ ನಗರಗಳು ಎಂದು ಹೇಳುವ ಸಂದರ್ಭದಲ್ಲಿ "ಅದು ಒಂದು ರೀತಿ ಭೂಗತ ಸ್ವಾತಂತ್ರ್ಯ ಹೋರಾಟವಾಗಿತ್ತು, ನಮ್ಮ ತುರ್ತು ಪರಿಸ್ಥಿತಿಯ ಹಾಗೆ ಅಥವಾ ನಮ್ಮ ನಕ್ಸಲೀಯರ ಹೋರಾಟದ ಹಾಗೆ [2] ಎಂದು ಹೇಳುತ್ತಾರೆ. ಇಲ್ಲಿ ಕರಿಯರು ತಮ್ಮ ಹಕ್ಕುಗಳಿಗಾಗಿ, ತಮ್ಮ ಸ್ವಾತಂತ್ರ್ಯಕ್ಕಾಗಿ ಭೂಗತವಾಗಿ ಹೇಗೆ ವ್ಯವಸ್ಥೆಯ ವಿರುದ್ಧವಾಗಿ ಹೋರಾಟವನ್ನು ನಡೆಸಿದರೋ ಅದೇ ರೀತಿಯ ಹೋರಾಟ ನಮ್ಮ ನಕ್ಸಲೀಯರದು ಎಂಬ ಅಭಿಮತ ದ್ವಾರಕಾನಾಥರವರದು. ಇಲ್ಲಿಗೆ ನಕ್ಸಲೀಯರಿಗೆ ಲೇಖಕರ ಪರೋಕ್ಷವಾದ ನೈತಿಕ ಬೆಂಬಲವಿರುವುದು ಗೊತ್ತಾಗುತ್ತದೆ.

ಅವರ ನೆಚ್ಚಿನ ಕರಿಯ ವಿಜ್ಞಾನಿ ಜಾರ್ಜ್ ವಾಷಿಂಗ್‌ಟನ್ ಕಾರ್ವಾರ್‌ನ ಜೀವನ ಸಾಧನೆಯನ್ನು ಹೇಳುತ್ತಾ 'ಆತ ಕೃಷಿ ಹಾಗೂ ಸಸ್ಯಶಾಸ್ತ್ರ ಸಂಶೋಧನೆಯಲ್ಲಿ ಹೊಸ

---

1.- ಅದೇ -ಪುಟ-43

2. -ಅದೇ-ಪುಟ -35

ಆಯಾಮವನ್ನೇ ಸೃಷ್ಟಿಸಿದ. ಕಡಲೇಕಾಯಿಯಿಂದ ೩೦೦ಕ್ಕೂ ಹೆಚ್ಚಿನ ಸಾಮಾಗ್ರಿಗಳನ್ನು ಪರಿಷ್ಕರಿಸುವ ಮಾರ್ಗ ಹುಡುಕಿಕೊಟ್ಟ. ಕಡಲೇಬೀಜದ ಬೆಣ್ಣೆಯನ್ನು, ಗೆಣಸು, ಆಲೂಗಡ್ಡೆ, ಸೋಯಾಬೀನ್ಸ್, ಅರಳೆ ಹಾಗೂ ನಾನಾ ಬಗೆಯ ತ್ಯಾಜ್ಯ ವಸ್ತುಗಳಿಂದ ನೂರಾರು ದಿನ ಬಳಕೆ ವಸ್ತುಗಳನ್ನು ತಯಾರಿಸುವ ವಿಧಾನಗಳನ್ನು ಕಂಡು ಹಿಡಿದ. ಇಂದಿನ ಫೈಬರ್‌ಗೆ ಈತನೇ ಕಾರಣಕರ್ತ" ಎಂದು ಹೇಳಿ "ಈತನ ಬಗ್ಗೆ ಯೋಚಿಸಿದಂತೆಲ್ಲ ರಾಗಿಯಲ್ಲಿ ಒಂದು ಕ್ರಾಂತಿಯನ್ನೇ ಮಾಡಿ ಬಿಟ್ಟ ನಮ್ಮ ರಾಗಿ ಲಕ್ಷ್ಮಣಯ್ಯ ನೆನಪಾಗುತ್ತಾರೆ" [3] ಎಂದು ಕೃಷಿ ವಿಜ್ಞಾನಿ ಕಾರ್ವಾರನ ಸಾಧನೆಯೊಂದಿಗೆ ಭಾರತೀಯ ಕೃಷಿ ವಿಜ್ಞಾನಿ ಲಕ್ಷ್ಮಣಯ್ಯನನ್ನು ಹೋಲಿಸುತ್ತಾ ನಮ್ಮ ದೇಶದಲ್ಲಿಯೂ ಇಂತಹ ಮಹಾನ್ ಸಾಧಕರಿದ್ದಾರೆಂಬುದನ್ನು ನೆನಪಿಸುತ್ತಾರೆ.

ಶಿಕಾಗೋ ನಗರದ ದೇವಾನ್ ರಸ್ತೆಯನ್ನು 'ಮಿನಿ ಇಂಡಿಯಾ' ಎಂದೇ ಕರೆದಿದ್ದಾರೆ. ಅಲ್ಲಿರುವ ರಸ್ತೆಗಳನ್ನು, ಅಂಗಡಿಗಳನ್ನು ಇವರು "ಹೆಚ್ಚು ಕಡಿಮೆ ನಮ್ಮ ಬಳೆ ಪೇಟೆಯಂತಿದ್ದ ಆ ರಸ್ತೆಯಲ್ಲಿ ಉಡುಪಿ ಕೃಷ್ಣಭವನ್, ಮೈಸೂರು ಉಡ್‌ಲ್ಯಾಂಡ್ಸ್, ಕಾಮತ್, ಕಾರಂತ್ ಅಂತಹ ಅನೇಕ ಹೋಟೆಲ್ಲುಗಳೊಂದಿಗೆ ಥೇಟ್ ಚಿಕ್ಕಪೇಟೆ, ಮಾಮೂಲ್ ಪೇಟೆಗಳಂತೆಯೇ ನಾನಾಬಗೆಯ ಸೀರೆ, ರೆಡಿಮೇಡ್ ಉಡುಪುಗಳ ಅಂಗಡಿಗಳು ಕಿರಾಣಿ ಅಂಗಡಿಗಳು, ಪಾನ್‌ಬೀಡಾ ಅಡ್ಡೆಗಳು ಸಾಲುಸಾಲಾಗಿ ನಿಂತಿದ್ದವು. ರಸ್ತೆಗಳಲ್ಲೂ ಕೂಡ ಧಾರಾಳವಾಗಿ ಕಸಕಡ್ಡಿ ತುಂಬಿತ್ತು. ಎಲ್ಲೆಂದರಲ್ಲಿ ಮನಸೋ ಇಚ್ಛೆ ಉಗಿದಿದ್ದರು" ಎಂದು ಹೇಳುತ್ತಾರೆ ನಮ್ಮ ದೇಶೀಯರು. ಯಾವ ದೇಶದಲ್ಲಿದ್ದರೂ ಅದನ್ನು ತಮ್ಮ ದೇಶದ ರೂಪಿಗೆ ಬದಲಾಯಿಸಿಕೊಂಡು ಬಿಡುತ್ತಾರೆಂಬ ಚಿತ್ರಣ ಈ ಮಾತುಗಳಿಂದ ಮೂಡುತ್ತದೆ. ಇಲ್ಲಿಗೆ ಮೊದಲು ಕೌಂಟಿಯಿಂದ ಇಂಗ್ಲೀಷಿನವರು ನಂತರ ಇಸ್ರೇಲಿಗಳು ತದನಂತರ ಭಾರತೀಯರು ಇಲ್ಲಿಗೆ ವಲಸೆ ಬಂದರು. "ಭಾರತೀಯರು ಇಲ್ಲಿ ಅಂಗಡಿ ಮುಂಗಟ್ಟುಗಳನ್ನು ತೆರೆಯಲಾರಂಭಿಸಿದರು ಜೊತೆಜೊತೆಗೆ ಪಾಕಿಸ್ತಾನಿ ಮತ್ತು ಬಾಂಗ್ಲಾ ದೇಶಗಳಿಂದಲೂ ನಮ್ಮ 'ಬ್ರದರ್ಸ್ ಬರತೊಡಗಿದರು" ಎಂದು ಹೇಳಿ ಪಾಕಿಸ್ತಾನಿ ಹಾಗೂ ಬಾಂಗ್ಲಾದವರು ಇವತ್ತಿಗೂ 'ಬಾಯಿ ಬಾಯಿ'ಗಳೇ ನಮ್ಮ ದೇಶದಲ್ಲಿ ಅಖಂಡ ಭಾರತ ಸೃಷ್ಟಿ ಸಾಧ್ಯವಾಗದಿದ್ದರೂ ದೂರದ ದೇಶವಾದ ಅಮೇರಿಕಾದಲ್ಲಿ ಅದು ಸಾಧ್ಯವಾಗಿದೆ ಎಂಬುದನ್ನು ಹೇಳುತ್ತಾರೆ. ಇಲ್ಲಿ ಮತೀಯತೆಯನ್ನು ಮೀರಿ ತಮ್ಮ ಸೋದರತ್ವವನ್ನು ಉಳಿಸಿಕೊಂಡು ಒಗ್ಗಟ್ಟಿನಿಂದ ಇದ್ದಾರೆಂದು "ಶಿಕಾಗೋದ ಈ ಮಿನಿಭರತಖಂಡ ಎಂದೂ ಕಿತ್ತಾಡದೆ ಮೂರು ದೇಶಗಳ ಹಬ್ಬ ಸಂಭ್ರಮಗಳನ್ನು ಹಂಚಿಕೊಂಡು ಮಿಠಾಯಿ ತಿಂದು ನಿಜ ಅರ್ಥದ ಬಾಯಿ ಬಾಯಿ ಆಗಿದ್ದಾರೆ" ಹಿಂದೂ ಮುಸ್ಲೀಂ 'ಬಾಯಿ ಬಾಯಿ' ಎಂದು ಬಾಯಿ ಮಾತಿನಲ್ಲಿ ಹೇಳುತ್ತಾ ಯಾವಾಗಲೂ ಒಬ್ಬರ ಮೇಲೆ ಒಬ್ಬರು ಕತ್ತಿ ಮಸೆಯುವ ನಾವು ಅಲ್ಲಿಯ ಕೋಮು ಸೌಹಾರ್ದತೆಯನ್ನು, ಐಕ್ಯತೆಯನ್ನು ನೋಡಿ ಕಲಿಯಬೇಕಾಗಿದೆ ಎಂಬುದನ್ನು ಸೂಚ್ಯವಾಗಿ

---

3. -ಅದೇ- ಪುಟ ೩೦

ಹೇಳಿದ್ದಾರೆ. ನಮ್ಮ ಅಖಂಡ ಭಾರತದ ಕನಸು ಇಲ್ಲಿ ನಿಜವಾಗದಿದ್ದರೂ ಅಲ್ಲಿ ನಿಜವಾಗಿದೆ.

ಇನ್ನು ಶಿಕಾಗೋದಲ್ಲಿ ರೈತರ ಸಂತೆಯನ್ನು ಕಂಡು ಪುಳಕಿತರಾಗುತ್ತಾರೆ. ಇಲ್ಲಿ ವಿಸ್ಕಾನ್ಸಿನ್ ರಾಜ್ಯದಿಂದ ಬಂದಿದ್ದ ರೈತಾಪಿ ಹೆಣ್ಣು ಮಗಳೊಬ್ಬಳನ್ನು ಮಾತಿಗೆಳೆಯುತ್ತಾರೆ. ಆಕೆಯ ಮಾತುಗಳಿಂದ ತಾನು ರೈತಳಾಗಿರುವುದು ಪುಣ್ಯವೆಂದು ಹೇಳಿದಾಗ ಇವರಿಗೆ ನಮ್ಮ ದೇಶದ ರೈತರ ಸ್ಥಿತಿಗತಿಗಳು ಆತ್ಮಹತ್ಯಾ ಪ್ರಕರಣಗಳು ನೆನಪಿಗೆ ಬರುತ್ತವೆ. ಆ ವಿಚಾರವನ್ನು ಆಕೆಯ ಮುಂದೆ ಹೇಳಿದಾಗ ಆಕೆ ಮುಗ್ಧವಾಗಿ 'ಅಲ್ಲಿ ಸರ್ಕಾರ ಎಂಬುದಿಲ್ಲವೆ' ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ಇವರು 'ಸರ್ಕಾರ ಎಂಬುದಿದೆ ಆದ್ದರಿಂದಲೆ ರೈತರಿಗೆ ಈ ರೀತಿ ಸಂಕಷ್ಟ' ಎಂದು ಹೇಳುತ್ತಾರೆ. ಆಕೆ "ನಿಮ್ಮ ನ್ಯಾಯಾಲಯಗಳ್ಯಾಕೆ ಇನ್ನೂ ಆ ಸರ್ಕಾರಗಳನ್ನು ಗಲ್ಲಿಗೇರಿಸಲಿಲ್ಲ?" ಎಂದು ಕೇಳಿದಾಗ ಇವರಲ್ಲಿ ಅದಕ್ಕೆ ಸಮರ್ಪಕ ಉತ್ತರವಿರಲಿಲ್ಲವಾಗಿ 'ಆಕೆ ಕೇಳುತ್ತಿದ್ದ ಪ್ರಶ್ನೆ ಗಳಿಗೆ ನಾನೂ ಕೂಡ ಇಂತಹ ಸರ್ಕಾರದಲ್ಲಿ ಅನ್ನ ತಿನ್ನುತ್ತಿದ್ದೆನಲ್ಲ ಎಂಬ ಗಿಲ್ಟ್ ಕಾಡತೊಡಗಿತು. ಮೆಲ್ಲಗೆ ಅಲ್ಲಿಂದ ತಲೆ ತಪ್ಪಿಸಿಕೊಂಡೆ" [4] ಎಂದು ಹೇಳುತ್ತಾರೆ. ಅಲ್ಲಿ ಒಬ್ಬ ರೈತ ತಾನೊಬ್ಬ ರೈತನಾಗಿರುವುದೇ ಪುಣ್ಯವೆಂಬ ಭಾವವಿದ್ದರೆ, ನಮ್ಮ ದೇಶದಲ್ಲಿ ಅದಕ್ಕೆ ತದ್ವಿರುದ್ಧ. ಇಂದು ಊರನ್ನು ಬಿಟ್ಟು ನಗರಗಳಿಗೆ ಗುಳೆ ಬರುವವರೆ ಹೆಚ್ಚಾಗಿದ್ದಾರೆ. ಭಾರತದ ಬೆನ್ನೆಲುಬು ರೈತ. ಇಂತ ರೈತರ ಹಿತ ಕಾಪಾಡುವುದು ಸರ್ಕಾರಗಳ ಹೊಣೆ. ತನ್ನ ಹೊಣೆಗಾರಿಕೆಯನ್ನು ನಮ್ಮ ಸರ್ಕಾರ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಇದರಿಂದ ತಿಳಿಯುತ್ತದೆ. ರೈತನಿಗೆ ಸಿಗಬೇಕಾಗಿರುವ ಸವಲತ್ತುಗಳು ಬರೀ ನಮ್ಮ ರಾಜಕಾರಣಿಗಳ ಆಶ್ವಾಸನೆಗಳಲ್ಲಿ ಹಾಗೂ ಕಾಗದಗಳ ಮೇಲಿದೆಯೇ ಹೊರತು, ಅದು ಕಾರ್ಯರೂಪಕ್ಕೆ ಬಂದಿಲ್ಲ. ನಮ್ಮ ಇಲ್ಲಿನ ವ್ಯವಸ್ಥೆಯಲ್ಲಿನ ರೈತರ ಗೋಳನ್ನು ಅಲ್ಲಿನ ವ್ಯವಸ್ಥೆಯಿಂದ ಮಂದಹಾಸವನ್ನು ಸೂಸುತ್ತಿರುವ ರೈತರನ್ನು ತುಲನಾತ್ಮಕವಾಗಿ ನೋಡಿದ್ದಾರೆ. ಅಷ್ಟೇ ಅಲ್ಲದೆ ರೈತರ ಹಿತ ಕಾಪಾಡುವ ಇಚ್ಛಾಶಕ್ತಿಯ ಕೊರತೆ ನಮ್ಮ ಸರ್ಕಾರ, ವ್ಯವಸ್ಥೆಗಳಿಗಿವೆ ಎಂಬುದನ್ನು ಹೇಳುವ ಪ್ರಯತ್ನ ಮಾಡಿದ್ದಾರೆ.

ದ್ವಾರಕಾನಾಥರು ಅಲ್ಲಿನ ರಸ್ತೆಗಳ ವ್ಯವಸ್ಥೆ ಅದು ನಿರ್ಮಾಣವಾದ ರೀತಿಯನ್ನು ಹೇಳುತ್ತಾ "54 ವರ್ಷಗಳ ಹಿಂದೆ ಆರಂಭವಾದ ಕ್ರಾಂತಿಕಾರಿ ರಸ್ತೆ ಕಾಮಗಾರಿ ಇಂದು ಎರಡೂವರೆ ಲಕ್ಷ ಕಿಲೋಮೀಟರ್‌ಗಳ ಸುಸಜ್ಜಿತ ಹೈವೆವ್ಯೂಹ ಅಮೆರಿಕದ ಬದುಕಿನ ನರನಾಡಿಗಳಂತೆ ಹಬ್ಬಿ ಹೋಗಿವೆ. ಇಂಥ ಅದ್ಭುತ ಸಂಚಾರಿ ವ್ಯವಸ್ಥೆ ಅಮೆರಿಕದ ಆರ್ಥಿಕ ಬೆನ್ನೆಲುಬು" [5] ಎಂದು ಹೇಳುತ್ತಾ ಸ್ವಾತಂತ್ರ್ಯ ಬಂದು ಅರವತ್ತು ವರ್ಷ ನಂತರ ಇಂಡಿಯಾದಲ್ಲೂ ಚತುಷ್ಪಥ ರಸ್ತೆ ಕಾಮಗಾರಿ ಆರಂಭವಾಗಿದೆ. ಆ ಕಾಮಗಾರಿ ಅಮೆರಿಕದ ಹೈವೆ ವ್ಯವಸ್ಥೆಯಂತೆ ಸುಧಾರಿಸಲೂ ಇನ್ನೂಂದೈವತ್ತು ವರ್ಷ ಬೇಕಾಗಬಹುದು" ಎಂದು ಒಂದು ಕಡೆ ಹೇಳಿದರೆ ಮತ್ತೊಂದು ಕಡೆ ಈ ಹೈವೇಗಳಲ್ಲಿ ವಾಹನಗಳನ್ನು ಬಿಟ್ಟರೆ "ಜನರಿಂದ ಓಡಾಡುವ ವಾಹನಗಳು ಹಾರ್ನ್ ಕೂಡ

4. -ಅದೇ -ಪುಟ 51

5. -ಅದೇ -ಪುಟ 48

ಮಾಡುತ್ತಿರಲಿಲ್ಲ. ಜನ ಮತ್ತು ಪ್ರಾಣಿಗಳೇ ಸಮಾನವಾಗಿ ತುಂಬಿ ತುಳುಕಾಡುವ ನನ್ನ ದೇಶದ ಆ ಜೀವಂತ ರಸ್ತೆಗಳಲ್ಲಿ ಮನುಷ್ಯ, ಪ್ರಾಣಿಗಳಿರಲಿ ಶಬ್ಧವೂ ಇಲ್ಲದ ಈ ಅಸಹನೀಯ ರಸ್ತೆಗಳೆಲ್ಲಿ[6] ಎಂದಿದ್ದಾರೆ. ಆ ದೇಶದ ರಸ್ತೆ ವ್ಯವಸ್ಥೆಯಂತೆ ನಮ್ಮಲ್ಲಿಯೂ ರಸ್ತೆಗಳು ನಿರ್ಮಾಣವಾಗಬೇಕು. ಇದು ದೇಶದ ಅರ್ಥ ವ್ಯವಸ್ಥೆಯ ಬೆನ್ನೆಲುಬಾಗುತ್ತವೆ. ಅದರ ಜೊತೆಗೆ ಆ ರಸ್ತೆಗಳಲ್ಲಿ ಜೀವಂತಿಕೆಯೇ ಇಲ್ಲ. ಆ ರಸ್ತೆಗಳಿಗಿಂತ  ಜೀವಂತಿಕೆ ಇರುವ ನಮ್ಮ ರಸ್ತೆಗಳೇ ಮೇಲೆ ಎಂಬ ದ್ವಂದ್ವ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಇದೇ ರೀತಿಯ ದ್ವಂದ್ವತೆ ಅಲ್ಲಿನ ಶಾಲೆಗಳ ವಿಷಯದಲ್ಲಿಯೂ ವ್ಯಕ್ತವಾಗಿದೆ. ಇವರ ಸ್ನೇಹಿತ ಮೃತ್ಯುಂಜಯ ಅವರ ಮಗುವನ್ನು ಶಾಲೆಗೆ ಬಿಡುವಾಗ ಅಲ್ಲಿನ ಶಾಲೆ ಹಾಗೂ ಆ ವಾತಾವರಣವನ್ನು ವಿವರಿಸುತ್ತಾ ಅವರು ಓದಿದ ಶಾಲೆಯನ್ನು ನೆನಪಿಸಿಕೊಳ್ಳುತ್ತಾರೆ. "ಆ ಶಾಲೆ, ಅದರ ಸುತ್ತಲಿನ ಬೆಟ್ಟಗುಡ್ಡಗಳು ವಿಶಾಲವಾದ ಹುಲ್ಲು ಹಾಸು, ಕ್ರೀಡಾಂಗಣ, ಅಲ್ಲಿನ ಸ್ವಚ್ಛತೆ ಗಂಭೀರ ವಾತಾವರಣ, ನೀರವತೆ ನಿಜಕ್ಕೂ ಕಲಿಯುವಂತಹ ಪರಿಸರ" ಎಂದು ಹೇಳಿ ತಾವು ಓದಿದ ಸರ್ಕಾರಿ ಶಾಲೆಯನ್ನು ನೆನಪಿಸಿಕೊಳ್ಳುತ್ತಾರೆ.

'ಇವರು ಓದಿದ್ದು ಸರ್ಕಾರಿ ಶಾಲೆಯಲ್ಲಿ. ಅದಕ್ಕೆ ಬಾಗಿಲಿದ್ದರೂ ಗ್ರಿಲ್ ಇರಲಿಲ್ಲ. ಗ್ರಿಲ್ ಮೂಲಕ ನಾಯಿಗಳು ಒಳಹೋಗಿ ಮಲಗುತ್ತಿದ್ದವು. ಇವರುಗಳು ಬೆಳಗ್ಗೆ ಬೇಗ ಹೋಗಿ ಗ್ರಿಲ್ ಮೂಲಕ ನಾಯಿಗಳನ್ನು ಓಡಿಸಿ ಗುಡಿಸುತ್ತಿದ್ದರು. ನಂತರ ಜವಾನ ಬಂದು ಶಾಲೆಯ ಬೀಗ ತೆರೆಯುತ್ತಿದ್ದ. ಅಲ್ಲಿ ಅನೇಕ ರೀತಿಯ ಹುಳುಹುಪ್ಪಟ್ಟೆ ಪಕ್ಷಿಗಳು ನಿರ್ಭಯವಾಗಿ ಓಡಾಡುತ್ತಿದ್ದವೆಂದು ಅಮೆರಿಕಾದ ಶಾಲೆಯ ವಾತಾವರಣವನ್ನು ತಮ್ಮ ಶಾಲೆಯ ವಾತಾವರಣದೊಂದಿಗೆ ಹೋಲಿಕೆ ಮಾಡುತ್ತಾ "ಇದನ್ನೆಲ್ಲಾ ಕಂಡಾಗ ಯಾಕೋ ನಮ್ಮ ಶಾಲೆಯೇ ಚೆನ್ನಾಗಿದೆ ಎನಿಸುತ್ತಿತ್ತು. ನಮ್ಮ ಶಾಲೆಯಲ್ಲಿ ಪುಸ್ತಕಗಳಿರಲಿಲ್ಲ ಅನ್ನುವುದನ್ನು ಬಿಟ್ಟರೆ ಮಿಕ್ಕೆಲ್ಲಾ ಜೀವಚರಗಳು ಇದ್ದವು. ಆದರೆ ಇಲ್ಲಿನ ಶಾಲೆಗಳಲ್ಲಿ ಪುಸ್ತಕಗಳಿವೆ, ಜೀವಚರಗಳೇ ಇಲ್ಲ! [7] ಎಂದಿದ್ದಾರೆ.

ನಮ್ಮಲ್ಲಿ ಜೀವನಕ್ಕೆ ಬೇಕಾದ ಜೀವಂತಿಕೆಯಿಂದ ತುಂಬಿದ ವಿಚಾರಗಳನ್ನು ನೇರವಾಗಿ ತಿಳಿದುಕೊಳ್ಳುತ್ತೇವೆ. ಜೀವಂತಿಕೆಯ ಉದಾಹರಣೆಗಳೇ ದೊರೆಯುವಾಗ ಪುಸ್ತಕದ ಅವಶ್ಯಕತೆ ಕಂಡು ಬರುವುದಿಲ್ಲ. ಈ ಕೃತಿಯ ಮತ್ತೊಂದು ಪ್ರಸಂಗದಲ್ಲಿ ತಿಗಣೆಯನ್ನು ಟಿವಿಯ ಮುಖೇನ ತೋರಿಸುತ್ತಾ ಅದು ಯಾವ ರೀತಿಯ ಪ್ರಾಣಿ ಅದರ ಗುಣಲಕ್ಷಣಗಳೇನು ಎಂಬುದನ್ನು ತೋರಿಸುತ್ತಿದ್ದರು ಎಂದು ಹೇಳುತ್ತಾರೆ. ಏಕೆಂದರೆ ತಿಗಣೆ ಎಂಬ ಪ್ರಾಣಿಯನ್ನೇ ಅಮೆರಿಕದ ಜನತೆ ನೋಡಿರುವುದಿಲ್ಲ. ಆದರೆ ನಮ್ಮ ದೇಶದಲ್ಲಿ ತಿಗಣೆಯಿಂದ ಕಡಿಸಿಕೊಳ್ಳದ ಮನುಷ್ಯನೇ ಇಲ್ಲವೆನ್ನಬಹುದು. ಹಾಗಾಗಿ ನಮ್ಮ ಕಲಿಕೆಯು ಬರೀ ಪುಸ್ತಕದ ಕಲಿಕೆಯಲ್ಲ ಜೀವಂತವಾದ

---

6. ಅದೇ ಪುಟ 51

7. ಅದೇ ಪುಟ 103

ಕಲಿಕೆ ಎಂಬುದು ವಿವರಗಳಿಂದ ತಿಳಿದು ಬರುತ್ತವೆ.

ಈ ದೇಶದಲ್ಲಿ ಶೌಚವನ್ನು ಒರೆಸಲು ಕಾಗದವನ್ನು ಬಳಸುವ ಬಗ್ಗೆ ಹೇಳುತ್ತಾ ಪ್ರತಿಯೊಬ್ಬ ಭಾರತೀಯನಿಗೂ ಕಾಗದ, ಪುಸ್ತಕ ಅಂದರೆ ಸಾಕ್ಷಾತ್ ಸರಸ್ವತಿ ಅದನ್ನು ನೋಡದೆ ತುಳಿದರೆ ದೊಡ್ಡವರು 'ಪೇಪರನ್ನು ಕಾಲ ಕೆಳಗೆ ಹಾಕಿ ತುಳಿತಾನಲ್ಲ ಇವ್ನು. ಇವ್ನಿಗೆ ಸರಸ್ವತಿ ಅಂಟುತ್ತಾಳೆಯೇ?' ಎಂದು ಬೈಯುತ್ತಾರೆ. ಹಾಗಿರುವಾಗ ಪವಿತ್ರವಾದ ಪೇಪರಿನಲ್ಲಿ ಇಂತ ಹೇಯ ಕೆಲಸ ಮಾಡಲು ಮನಸ್ಸು ಒಪ್ಪುತ್ತಿರಲಿಲ್ಲ. ಆದರೂ ಅನಿವಾರ್ಯವಾಗಿ ಆ ಕೆಲಸ ಮಾಡಲೇಬೇಕಿತ್ತು' ಎಂದು ಹೇಳುತ್ತಾ ಈ ಕೆಲಸಕ್ಕಾಗಿ ಅಮೆರಿಕದವರು ಪ್ರತಿದಿನ ಎಷ್ಟು ಪೇಪರ್ ಬಳಸುತ್ತಾರೆ ಎಂಬ ಅಂಕಿ ಅಂಶವನ್ನು ನೀಡುತ್ತಾ "ನಮ್ಮ ದೇಶದಲ್ಲಿ ಬರೆಯಲಿಕ್ಕೆ, ಓದಲಿಕ್ಕೆ ಮಕ್ಕಳಿಗೆ ಪೇಪರ್ ಇಲ್ಲ, ಇದ್ದ ಒಬ್ಬ ಕಾಡನ್ನೆಲ್ಲಾ ಕಡಿದು ಪೇಪರ್ ಒದಗಿಸಲು ಆಗುತ್ತಿಲ್ಲ. ನಮ್ಮ ಹಳ್ಳಿಗಳಲ್ಲಿ ಇಂದಿಗೂ 32 ಪೇಜಿನ ನೋಟ್‌ಬುಕ್ ಕೊಳ್ಳಲೂ ಪರದಾಡುವ ಮಕ್ಕಳ ಚಿತ್ರ ನನ್ನ ಕಣ್ಣ ಮುಂದೆ ಬರುತ್ತಿತ್ತು" [8] ಎಂದು ಹೇಳಿದ್ದಾರೆ. ನಮ್ಮಲ್ಲಿ ಯಾವುದನ್ನು ಪವಿತ್ರವೆಂದು ಭಾವಿಸಲಾಗುತ್ತದೆಯೋ ಅದನ್ನು ಅಲ್ಲಿ ಅಪವಿತ್ರ ಕೆಲಸಕ್ಕೆ ಬಳಸಲಾಗುತ್ತದೆ. ವಿದ್ಯೆ ಕಲಿಯಲಿಕ್ಕೆ ಕಾಗದಗಳು ನಮ್ಮಲ್ಲಿ ದೊರೆಯದಿರುವಾಗ ಅಲ್ಲಿ ದಿನನಿತ್ಯದ ಟಾಯ್ಲೆಟ್, ಅಡಿಗೆ ಮನೆ ಮುಂತಾದೆಡೆ ಅವುಗಳನ್ನು ಧಾರಾಳವಾಗಿ ಬಳಸುವುದನ್ನು ನೋಡಿ ಒಂದೆಡೆ ಅತಿವೃಷ್ಟಿಯಾದರೆ ಮತ್ತೊಂದೆಡೆ ಅನಾವೃಷ್ಟಿ ಎಂದು ಖೇದಗೊಳ್ಳುವುದು ಕಾಣಬಹುದು.

ಹೀಗೆ ದ್ವಾರಕಾನಾಥರು ಅಲ್ಲಿ ಕಂಡಂತ, ಅನುಭವಿಸಿದಂತಹ ಎಷ್ಟೋ ಸನ್ನಿವೇಶ ಗಳೊಂದಿಗೆ ಭಾರತವನ್ನು ಹೋಲಿಸುತ್ತಾ ಹೋಗುತ್ತಾರೆ. ಎಷ್ಟೇ ಆಗಲಿ ನಮ್ಮದು ಭಾರತೀಯ ಮನಸ್ಸಲ್ಲವೇ! ಹಾಗಾಗಿ ಅಲ್ಲಿಯ ರಸ್ತೆ ಮತ್ತು ಶಾಲೆಗಳು ನಮ್ಮದ್ದಕ್ಕಿಂತ ಚೆನ್ನಾಗಿದ್ದರೂ ಅದನ್ನು ಹೊಗಳದೇ ನಮ್ಮದೇ ಮೇಲು ಎಂದು ಹೇಳುತ್ತಾರೆ. ನಮ್ಮ ದೇಶದಲ್ಲಿ ಕಾಣಲಾಗದ ಅಖಂಡ ಭಾರತವನ್ನು ಆ ದೇಶದಲ್ಲಿ ಕಂಡು ಸಂಭ್ರಮಿಸುವುದನ್ನು ಈ ಕಥನದಲ್ಲಿ ಕಾಣಬಹುದು.

ನಾವೆಲ್ಲಾ ತಿಳಿದಂತೆ ಅಮೆರಿಕಾ ಆರ್ಥಿಕವಾಗಿ ಸಮೃದ್ಧವಾಗಿರುವ ದೇಶ. ನಮ್ಮ ದೇಶದಲ್ಲಿರುವಂತೆ ಅಲ್ಲಿ ಬಡವರಾಗಲಿ, ಭಿಕ್ಷುಕರಾಗಲಿ ಇಲ್ಲ, ಎಲ್ಲರೂ ಸಮಾನರು. ಆದರೆ ಅಲ್ಲಿಯೂ ನಮ್ಮ ದೇಶದಲ್ಲಿರುವಂತೆ ಭಿಕ್ಷುಕರಿದ್ದಾರೆ ಎಂದು ತಾವು ಡಲ್ಲಾಸ್ ನಗರದಲ್ಲಿ ಕಂಡ 'ಹೋಮ್‌ಲೆಸ್'ಗಳ ಬಗ್ಗೆ ಹೇಳಿದ್ದಾರೆ. "ಅಮೆರಿಕದ ಶ್ರೀಮಂತಿಕೆ ಬಗ್ಗೆ ಮಾತ್ರ ಅಲ್ಲಿಗೆ ಹೋಗಿ ಬಂದವರ ಮೂಲಕ ಕೇಳಿದ್ದ ನನಗೆ ಇಲ್ಲೂ ಭಿಕ್ಷುಕರಿದ್ದಾರೆಂದು ಯಾರು ಹೇಳಿರಲಿಲ್ಲವೆಂದು ಉದ್ಗರಿಸುತ್ತಾರೆ. ಇಲ್ಲಿಯ ಸಮೀಕ್ಷೆಯೊಂದರ ಪ್ರಕಾರ ಏಳೂವರೆ ಲಕ್ಷ ಹೋಮ್‌ಲೆಸ್‌ದ್ದಾರೆಂದು "ಬಡತನ, ನಿರುದ್ಯೋಗ, ಸಂಸಾರದ ತಾಪತ್ರಯ, ಕುಡಿತ ಮತ್ತು ಡ್ರಗ್ ಚಟಗಳಿಗೆ ಬಲಿಯಾಗಿ ಹೋಮ್‌ಲೆಸ್ ಆಗಿರೋ ಅಲ್ಲಿಯ ಜನಕ್ಕೂ ನಮ್ಮ ದೇಶದ ಮುಂಬೈ ಕೋಲ್ಕತ್ತಾ ನಗರಗಳ

8. -ಅದೇ -ಪುಟ 87

ಬೀದಿಗಳಲ್ಲಿ ಕಳೆಯುವ ನತದೃಷ್ಟರಿಗೂ ಅಂತಹ ವ್ಯತ್ಯಾಸವಿಲ್ಲ[9] ವೆಂದು ಹೋಲಿಸಿದ್ದಾರೆ. ಜೊತೆಗೆ ಅಲ್ಲಿನ ಹೋಮ್‌ಲೆಸ್‌ಗಳೆಲ್ಲ ಬಹುತೇಕ ಕರಿಯರಾಗಿದ್ದರಿಂದ ಲೇಖಕರು ಅಲ್ಲಿನ ಹೋಮ್‌ಲೆಸ್‌ಗಳ ಜೀವನವನ್ನು ಹತ್ತಿರದಿಂದ ನೋಡಲೂ ಬಯಸುತ್ತಾರೆ. ಹಾಗಾಗಿ ತಮ್ಮ ಸ್ನೇಹಿತನಿಗೆ ದುಂಬಾಲು ಬೀಳುತ್ತಾರೆ. ಇದರಿಂದ ಇವರ ಪ್ರವಾಸ ಯಾವ ನಿಟ್ಟಿನದು ಎಂದು ತಿಳಿಯುತ್ತದೆ.

ನಮ್ಮಲ್ಲಿ ಹಾಳುಬಿದ್ದ ಮನೆಗಳಲ್ಲಿ, ಗಲ್ಲಿಗಳಲ್ಲಿ, ಪುಟ್‌ಪಾತ್ ಹೀಗೆ ಎಲ್ಲೆಂದರಲ್ಲಿ ಮಲಗಿಕೊಂಡು ಹೇಸಿಗೆ ಮಾಡುವಂತೆ ಅಲ್ಲಿಯೂ ಕೂಡ ಹೋಮ್‌ಲೆಸ್‌ಗಳು ಗ್ಯಾರೆಜೊಂದರಲ್ಲಿ ಮಲಗಿ ಹೇಸಿಗೆ ಮಾಡಿದ ಪ್ರಸಂಗವನ್ನು ಹೇಳುತ್ತಾ "ಗ್ಯಾರೆಜಿನ ಮೊದಲ ಮಹಡಿಯಲ್ಲಿ ಚಿಂದಿ, ಪೇಪರ್, ಹರಕು ಬಟ್ಟೆಗಳು ಕಂಡು ಬಂದವು. ಅಲ್ಲೇ ಮಲಗಿದ್ದ ಏಳೆಂಟು ಜನರಿಗೆ ಬುದ್ಧಿವಾದ ಹೇಳಿದ ಪೊಲೀಸರು ಆದಷ್ಟು ಬೇಗ ಜಾಗ ಖಾಲಿ ಮಾಡಲು ಹೇಳಿ ಎರಡನೇ ಮಹಡಿಗೆ ಹೋದಾಗ ಗಬ್ಬುನಾತ ಹೊಡೆಯತೊಡಗಿತು" ಎಂದು ಹೇಳುವಾಗ ಎಷ್ಟೇ ಮುಂದುವರೆದ ದೇಶವೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡಿದ್ದರು ಅಲ್ಲಿಯೂ ನಮ್ಮ ದೇಶದಂತೆ ಬಡತನ, ನಿರುದ್ಯೋಗ ಸಮಸ್ಯೆಗಳಿವೆ ಎಂಬುದು ಮನವರಿಕೆಯಾಗುತ್ತವೆ. ಲೇಖಕರು 'ಮಾನವ ಹಕ್ಕುಗಳಿಗಾಗಿ ಸ್ಪಂದಿಸಿ ಬಲಿಯಾದ ಕೆನಡಿ, ಆತನ ಸ್ಮಾರಕದ ಸುತ್ತ ಮುತ್ತ ಇರೋ ಹೋಮ್‌ಲೆಸ್‌ಗಳ ಸ್ಥಿತಿ ಮತ್ತೆ ನೆನಪಾಗತೊಡಗಿತು [10]ಎಂಬಲ್ಲಿ ದೀಪದ ಕೆಳಗೆ ಕತ್ತಲು ಎಂಬುದರ ದರ್ಶನವಾಗುತ್ತದೆ. ಇದರಿಂದ ನಿಜಕ್ಕೂ ಅಮೆರಿಕದ ಇನ್ನೊಂದು ಮುಖದ ಅನುಭವವಾಗುತ್ತದೆ.

ಇಂಥದ್ದೇ ಒಂದು ಅನುಭವವನ್ನು ಗೊರೂರರು ತಮ್ಮ ಕಥನದಲ್ಲಿ ಹೇಳಿದ್ದಾರೆ "ಅಮೆರಿಕದಲ್ಲಿಯೂ ನಿರುದ್ಯೋಗವಿದೆ. ಈ ನಿರುದ್ಯೋಗಿಗಳನ್ನು ಆರ್ಥಿಕವಾಗಿ ಕೆಳಮಟ್ಟದವರು ಎಂದು ನಿರ್ದೇಶಿಸುತ್ತಾರೆ. ಈ ಕೆಳಮಟ್ಟದಲ್ಲಿ ಬಿಳಿಯರು ಕೆಲವರು ಇದ್ದರೂ ಸಹ ಇದು ಮುಖ್ಯವಾಗಿ ಕರಿಯರ ಪ್ರಶ್ನೆ [11] ಎಂದು ಆ ದೇಶದಲ್ಲಿಯೂ ನಮ್ಮ ದೇಶದಂತೆ ಸಮಸ್ಯೆಗಳಿವೆ ಎಂಬುದನ್ನು ಬಿಂಬಿಸಿದ್ದಾರೆ.

ಈ ಇಬ್ಬರು ಲೇಖಕರು ತಿಳಿಸಿರುವ ಈ ಪ್ರಸಂಗಗಳಿಂದ ನಮಗೆ ಅಮೆರಿಕಾ ಎಂದರೆ ಆರ್ಥಿಕವಾಗಿ ಮುಂದುವರೆದ ವೈಭವೋಪೇತವಾದ ನಗರಗಳನ್ನು ಹೊಂದಿರುವ ದೇಶ. ಜನ ಆಯಿಷಾರಾಮಿ ಜೀವನವನ್ನು ನಡೆಸುತ್ತಾರೆ, ಬಡತನವೆಂಬುದೇ ಇಲ್ಲ ಎಂಬ ಭ್ರಮೆ ಕಳಚಿ ಅಲ್ಲಿಯೂ ನಮ್ಮ ದೇಶದಂತೆ ಬಡತನ ರೇಖೆಗಿಂತ ಕೆಳಗಿರುವ ಜನರಿದ್ದಾರೆಂಬುದು ತಿಳಿಯುತ್ತದೆ.

---

9. -ಅದೇ -ಪುಟ -90 10.- ಅದೇ- ಪುಟ -92

11. -ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಮೆರಿಕಾದಲ್ಲಿ ಗೊರೂರು ; ಪುಟ 304

## 7. ಭಾಷಿಕ ನೆಲೆ

ದ್ವಾರಕಾನಾಥರು ಪತ್ರಕರ್ತರಾಗಿ ಸಾಕಷ್ಟು ಅನುಭವವಿರುವಂತವರು ಅನೇಕ ಪತ್ರಿಕೆಗಳಲ್ಲಿ ಇವರ ಲೇಖನಗಳು ವರದಿಯಾಗಿದೆ. ಅಂತವರು ತಮ್ಮ ಪ್ರವಾಸದ ಅನುಭವವನ್ನು ಪ್ರವಾಸ ಕಥನದ ಮೂಲಕ ಒರೆಗಚ್ಚಿದ್ದಾರೆ. ಇವರ ಕಥನದ ಶೈಲಿ ಲವಲವಿಕೆಯಿಂದ ಕೂಡಿರುವ ಗದ್ಯವಾಗಿದೆ. ವೇಗವಾಗಿ ಸಂಚರಿಸುವ ವಾಹನದಂತೆ ನಮ್ಮನ್ನು ತಮ್ಮೊಂದಿಗೆ ಪ್ರಯಾಣಿಸುವಂತೆ ಮಾಡುತ್ತದೆ. ಅವರ ಕಥನದೊಂದಿಗೆ ನಾವು ಪ್ರವಾಸ ಮಾಡಿದ ಅನುಭವ ಉಂಟಾಗುತ್ತದೆ. ಎಲ್ಲವೂ ಹಿತಮಿತವಾಗಿದೆ. ಯಾವುದನ್ನು ವೈಭವೀಕರಿಸದೆ ಇರುವ ಸತ್ಯಸ್ಥಿತಿಯನ್ನು ನಮ್ಮ ಮುಂದೆ ಹರವುತ್ತಾ ಸಾಗುತ್ತಾರೆ. ಕರಿಯರ ಬವಣೆ, ಅವರ ಸಾಧನೆ, ಸ್ಮಾರಕ, ಚರ್ಚ್, ವಿಶ್ವವಿದ್ಯಾಲಯ ಅವುಗಳ ಹಿನ್ನಲೆ, ಇತಿಹಾಸ, ನಯಾಗಾರ ಫಾಲ್ಸ್‌ನ್ನು ನೋಡಿ ಉಂಟಾದ ಅನುಭವ ಜುಲು ಸಮುದಾಯ ಪರಿಚಯ, ಫೀನಿಕ್ಸ್ ಸೆಟಲ್‌ಮೆಂಟ್ ಹಾಗೂ ಇಂಡಿಯನ್ ಒಪೀನಿಯನ್ ಬಗ್ಗೆಯ ಮಾಹಿತಿ ಇವುಗಳನ್ನು ಅತ್ಯಂತ ಸರಳ ಹಾಗೂ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಕೆಲವೆಡೆ ವಿವರಣೆಗಳು, ಕೆಲವೆಡೆ ಕಥಾರೂಪಕಗಳು, ಕೆಲವೆಡೆ ಹಾಸ್ಯಗಳು ಇನ್ನೂ ಕೆಲವೆಡೆ ಅಂಕಿ ಅಂಶಗಳು ಅವರ ದಟ್ಟವಾದ ಅನುಭವಗಳನ್ನು ಹೊರ ಚೆಲ್ಲುತ್ತವೆ. ಇವರ ಶೈಲಿ, ನೇರ, ಸರಳ; ಅಲ್ಲಲ್ಲಿ ಸ್ವಲ್ಪ ಹಾಸ್ಯ, ತುಂಟತನ, ಜೊತೆಗೆ ಸೂಕ್ಷ್ಮ ಪ್ರೌಢಿಮೆಯನ್ನು ಒಳಗೊಂಡಿದ್ದು ಓದಿಸಿಕೊಂಡು ಹೋಗುತ್ತದೆ.

ದ್ವಾರಕಾನಾಥರು ಗಾಂಧಿ ಮೆಟ್ಟಿದ ನಾಡಿನಲ್ಲಿ ಕಥನದಲ್ಲಿ ಜೋಹಾನ್ಸ್‌ಬರ್ಗ್ ತಲುಪಿದ ಮೇಲೆ ಅಲ್ಲಿಯ ಕಾಲಮಾನ ಹಾಗೂ ಭಾರತೀಯ ಕಾಲಮಾನದ ನಡುವೆ ಇರುವ ಸುಮಾರು 3.30ಗಂಟೆಯ ವ್ಯತ್ಯಾಸವನ್ನು ಕಂಡುಕೊಂಡು 'ಭಾರತ ಮೂರೂವರೆಗಂಟೆಗಳಷ್ಟು ಕಾಲ ಮುಂದಿರುತ್ತೆ. ಸಮಯದಲ್ಲಿ ಮಾತ್ರ' ಎನ್ನುವ ಮಾತು ಅತ್ಯಂತ ಸೂಕ್ಷ್ಮ ಗ್ರಹಿಕೆಯಾಗಿದೆ. ಎರಡೂ ದೇಶಗಳು ಸಮಯದಲ್ಲಷ್ಟೇ ಮುಂದಿದ್ದು ಇನ್ನುಳಿದ ಎಲ್ಲಾ ವಿಚಾರದಲ್ಲಿ ಒಂದೇ ಎಂಬುದನ್ನು ಸೂಕ್ಷ್ಮವಾಗಿ ಈ ಮಾತಿನಲ್ಲಿ ಹೇಳಿದ್ದಾರೆ. ಇದೇ ರೀತಿ ಸೂಕ್ಷ್ಮ ಪ್ರೌಢಿಮೆ ಉಳ್ಳಂತೆ, ಧ್ವನಿಪೂರ್ಣ ಮಾತುಗಳು ಅಲ್ಲಲ್ಲಿ ಪ್ರಸಂಗಕ್ಕೆ ತಕ್ಕಂತೆ ವ್ಯಕ್ತವಾಗಿದೆ. ಅದೇ ಕಥನದಲ್ಲಿ ಸಮ್ಮೇಳನದ ಬಗ್ಗೆ ಹೇಳುತ್ತಾ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಉನ್ನತ ಆಯುಕ್ತೆ ಮೇರಿ ರಾಬಿನ್‌ಸನ್ ಬಗ್ಗೆ - "ಆಕೆ ಬಿಳಿಯಳಾದರೂ ಕಪ್ಪು ಆತ್ಮಗಳ ನೋವನ್ನು ಬಲ್ಲಂತಹ ಹೃದಯವಂತ ಹೆಣ್ಣುಮಗಳು"[1] ಎಂದಿದ್ದಾರೆ. ಈ ಮಾತಿನಲ್ಲಿ ವರ್ಣಭೇದ ವಿರೋಧಿ ಹೋರಾಟಕ್ಕೆ ಅವರಿಂದ ನೊಂದವರೇ ಆಗಬೇಕೆಂದೇನೂ ಇಲ್ಲ ಅವರ ನೋವನ್ನು ಅರ್ಥೈಸಿಕೊಳ್ಳುವ ಹೃದಯವಿದ್ದರೆ ಸಾಕು ಎಂಬುದು ಧ್ವನಿತವಾಗಿದೆ.

---

1. 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಪುಟ 23

ದ್ವಾರಕಾನಾಥರ ಭಾಷಾ ಶೈಲಿ ಹೊಸಗನ್ನಡದ ಗದ್ಯರೂಪವಾಗಿದ್ದರೂ ಅಲ್ಲಲ್ಲಿ ಕಾವ್ಯದ ಧ್ವನಿಗಳನ್ನು ಕಾಣಬಹುದಾಗಿದೆ. 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಕಥನದಲ್ಲಿ ದಕ್ಷಿಣ ಆಫ್ರಿಕಾದ ಡರ್ಬಾನ್‌ನಲ್ಲಿ ಪೋಲೀಸ್ ಅಧಿಕಾರಿಯಾಗಿರುವ ವಸಂತರವರು ಸ್ವಾತಂತ್ರ್ಯಾನಂತರ ಕೆಲಸದ ಸ್ಥಳಗಳಲ್ಲಿ ಭಾರತೀಯರ ವಿರುದ್ಧ ಕರಿಯರು ಮಾಡುತ್ತಿರುವ ಭೇದಭಾವಗಳಿಂದಾಗಿ ಭಾರತೀಯರಿಗೆ ಬಡ್ತಿ ಸಿಗುತ್ತಿಲ್ಲವೆಂದು ಕರಿಯರ ಬಗ್ಗೆ ಅಸಹನೆಯನ್ನು ತೋರಿಸಿದಾಗ, ಲೇಖಕರು "ಅಲ್ಲಿನ ಮೂಲ ನಿವಾಸಿಗಳಾದ ಕರಿಯರು ತಮ್ಮ ನೆಲದಲ್ಲೇ ನಿರ್ಗತಿಕರಾಗಿ ಬೇರೆ ದೇಶಗಳಿಂದ ಬಂದ ಬ್ರಿಟಿಷರು, ಬರ್ಮಾದವರು ಮತ್ತು ಭಾರತೀಯರ ಬಳಿ ಕೂಲಿಗಳಾಗಿ ಇಂದಿಗೂ ನರಳುತ್ತಿರುವ ದೃಶ್ಯ ವಸಂತರವರಿಗೆ ಸಹಜವೆನ್ನಿಸುವಂತಿತ್ತು! ದಕ್ಷಿಣಾ ಆಫ್ರಿಕಾದ ಕರಿಯರಷ್ಟೇ ಕಪ್ಪಗಿರುವ, ಭಾರತದ ಮುಖ ಚಹರೆಯಿರುವ ವಸಂತರವರ ಒಳಗೆ ಬಿಳಿಯರ ಕ್ರೂರ ಮನಸ್ಸಿದ್ದಂತಿತ್ತು" [2] ಎಂಬ ಮಾತುಗಳಲ್ಲಿ ದೇಹದ ಬಣ್ಣ ಕಪ್ಪಗಿದ್ದರೇನು ಅದರೊಳಗಿನ ಮನಸ್ಸು ಮುಖ್ಯ. ಆದರೆ ಆ ಮನಸ್ಸು ಬಿಳಿಯರಷ್ಟು ಕ್ರೂರ ಎಂಬುದು ಧ್ವನಿತವಾಗಿದೆ. ಅದೇ ರೀತಿ ಸಮ್ಮೇಳನದ ಕೊನೆಯ ದಿನ ನಡೆದ ರ್‍ಯಾಲಿಯಲ್ಲಿ "ಇಡೀ ವಿಶ್ವದ ಗಮನ ನಮ್ಮ ತಮಟೆಗಳ ಮೇಲಿತ್ತು ಪ್ರತಿ ದೇಶದವರೂ ನಮ್ಮ ಬಳಿಯೇ ಬಂದು ಕುಣಿಯಲು ಪ್ರಾರಂಭಿಸಿದರು. ನಮ್ಮ ತಮಟೆಗಳು ಮಾಡಿದ ತಂಟೆಗೆ ಕಡೆ ಕಡೆಗೆ  ನಮ್ಮ ಬ್ಯಾನರ್  ಕೆಳಗೆ ನಾವೇ ನಿಲ್ಲಲಾರದೇ ಹೋಗಿ ಯಾವ ಯಾವುದೋ ದೇಶಗಳವರು ನಮ್ಮ ಬ್ಯಾನರ್ ಹಿಡಿದು ನಮ್ಮ ತಮಟೆಯ ರಿದಂಗೆ ಕುಣಿಯ ತೊಡಗಿದರು!" [3] ಎನ್ನುವ ಅವರ ಮಾತುಗಳಲ್ಲಿ ಸಂಗೀತ ಹಾಗೂ ಸಮಸ್ಯೆಗಳೆರಡೂ 'ಮನುಷ್ಯ ಕುಲಂ ತಾನೊಂದೇ ವಲಂ' ಎಂಬಂತೆ ಮಾಡಿತು ಎಂಬ ಧ್ವನಿ ಇದೆ. ಇನ್ನು ದಕ್ಷಿಣ ಆಫ್ರಿಕಾದಿಂದ ಹಿಂತಿರುಗುವಾಗ ಮುನಿಲಾ ಸಲೀಖ ಹಾಗೂ ಅವರ ಮಕ್ಕಳಿಗೆ ವಿದಾಯ ಹೇಳಿ ಹೊರಡುವಾಗಿನ ಸನ್ನಿವೇಶವನ್ನು ಹೇಳುವಾಗ ಲೇಖಕರು 'ಜೂನ್ ಎಂಬ ನೀಗ್ರೋ ಹುಡುಗಿ ಅಳುತ್ತಿದ್ದುದನ್ನು ಕಂಡರೆ ಇಡೀ ಆಫ್ರಿಕಾ ನನಗಾಗಿ ಅತ್ತಂತೆ ಕಾಣುತ್ತಿತ್ತು! ಎಂಬ ಮಾತುಗಳಲ್ಲಿಯೂ ಅವರ ಭಾಷೆಯಲ್ಲಿದ್ದ ಧ್ವನಿಯನ್ನು ಗುರುತಿಸಬಹುದಾಗಿದೆ.

ಇನ್ನು ಲೇಖಕರು 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಕಥನದಲ್ಲಿ ಯಾವುದೇ ಸಂಕೋಚವಿಲ್ಲದೆ ಅಲ್ಲಿನ ಕರಿಯ ಮಹಿಳೆಯರನ್ನು ವರ್ಣಿಸಿರುವುದು ಅವರ ಭಾಷೆಯಲ್ಲಿನ ತುಂಟಾಟವನ್ನು ಕಾಣಬಹುದಾಗಿದೆ.  ಜೋಹಾನ್ಸ್‌ಬರ್ಗ್‌ನಲ್ಲಿ ಸುತ್ತುತ್ತಿದ್ದಾಗ ಕಣ್ಣಿಗೆ ಬಿದ್ದ ಹೆಣ್ಣುಗಳ ಬಗ್ಗೆ ಹೇಳುತ್ತಾ "ನಮಗೆ ಅಲ್ಲಿ ಆ ಕಪ್ಪು ಹೆಣ್ಣುಗಳನ್ನು ಬಿಟ್ಟು ಮತ್ತೇನೂ ಕಾಣಲೇ ಇಲ್ಲ! ಕಣ್ಣು ಹಾಯ್ದಷ್ಟೂ ಹೆಣ್ಣುಗಳೇ! ಇವೇನು ಪ್ರಮೀಳಾ ರಾಜ್ಯವೇ ಎನಿಸುತ್ತಿತ್ತು. ಅಚ್ಚ ಕಪ್ಪು ಕಲ್ಲಿನಲ್ಲಿ ಕಡೆದಿಟ್ಟ ದೇಹಗಳವು!" ಎಂದು ಹೇಳುತ್ತಾ "ನಮ್ಮ ಕುವೆಂಪು, ಬೇಂದ್ರೆ, ಲಂಕೇಶರೇನಾದರೂ ಇಲ್ಲಿ

2. 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಪುಟ 61

3. -ಅದೇ- ಪುಟ- 77

ಹುಟ್ಟಿದ್ದರೆ ಅವರು ಶ್ಯಾಮಲೆಯರನ್ನು ಬಿಟ್ಟು ಬೇರೆ ವಿಷಯಗಳ ಬಗ್ಗೆ ಒಂದಕ್ಷರವನ್ನಾದರೂ ಬರೆಯುತ್ತಿದ್ದರೆ?" [4] ಎಂದು ಬರೆಯುತ್ತಾ ಡರ್ಬಾನಿನಲ್ಲಿ ಮತ್ತೆ ಅದೇ ಕಪ್ಪು ಹೆಣ್ಣುಗಳನ್ನು ನೋಡಿ "ಆಫ್ರಿಕಾದಲ್ಲಿ ನೀನು ಎಲ್ಲಿಗೇ ಹೋಗು ನಾನು ನಿನ್ನನ್ನು ಕಾಡದೇ ಬಿಡುವುದಿಲ್ಲ, ಎನ್ನುವಂತಿತ್ತು ಅವರ ಆ ಮುಗುಳ್ನಗೆಯ ನೋಟ"![5] ಡರ್ಬಾನಿನ ಬೀಚಿನಲ್ಲಿ ಲೇಖಕರು ಕಂಡ ಕರಿಯ ಪ್ರೇಮಿಗಳ ಬಗ್ಗೆ ಹೇಳುತ್ತಾ ಆ ಹುಡುಗಿಯ ದೇಹಾಕೃತಿಯನ್ನೂ ವರ್ಣಿಸುತ್ತಾ "ಆ ಸೃಜನ ಬ್ರಹ್ಮಾಂಡ ಆಕಾರಕ್ಕೆ ಫಿಟ್ ಆಗುವಂತಹ ಜೀನ್ಸ್ ಯಾವ ಟೈಲರ್ ಹೊಲಿದನೋ, ಆ ಆಕಾರ ಮತ್ತು ಅದಕ್ಕೆ ಪ್ಯಾಂಟ್ ಸೃಷ್ಟಿಸಿದ ಆ ದೇವರಿಗೆ ಮಾತ್ರ ಗೊತ್ತಿರಲೂ ಸಾಧ್ಯ"! [6] ಎಂದು ತುಂಟತನದ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ. ಮತ್ತೊಮ್ಮೆ ಅದೇ ಬೀಚಿನಲ್ಲಿ ದಢೂತಿ ಕಪ್ಪು ಮಹಿಳೆಯನ್ನು ಕಂಡು ಲೇಖಕರು ಆಕೆ ಎಡಗಣ್ಣಿನಿಂದ ಬಲಕಣ್ಣಿಗೆ ಇರುವಷ್ಟು ಅಂತರ ನಡೆಯಬೇಕಾದರೆ ಕನಿಷ್ಠ ಐದು ನಿಮಿಷ ಬೇಕಾಗುತ್ತದೆಂದು ಅದಕ್ಕೆ ಸಮಜಾಯಿಷಿಯನ್ನು ಕೊಡುತ್ತಾ "ನೋಡು ಗುರೂ ಮೊದಲು ಆಕೆಯ ಎದೆ ಬರುತ್ತದೆ. ನಂತರ ಎರಡು ನಿಮಿಷಕ್ಕೆ ಆಕೆ ಬರುತ್ತಾಳೆ, ನಂತರ ಆಕೆಯ ಹಿಂಭಾಗ ಮುಗಿಯಲೂ ಕನಿಷ್ಠ ಮೂರು ನಿಮಿಷ ಬೇಕಾಗಬಹುದಲ್ಲವೇ? [7] ಎಂದು ಹೇಳುತ್ತಾರೆ. ಇಲ್ಲಿ ಇವರ ತುಂಟತನದ ಭಾಷಾ ಶೈಲಿಯನ್ನು ಕಾಣಬಹುದಾಗಿದೆ. ಗಾಂಧಿ ಮೆಟ್ಟಿದ ನಾಡಿನಲ್ಲಿ ಕಥನದಲ್ಲಿ ಡರ್ಬಾನ್ ಬೀಚಿನ ದೃಶ್ಯವನ್ನು ವರ್ಣಿಸುತ್ತಾ ಅಲ್ಲಿ ಕುದುರೆಗಳ ಮೇಲೆ ಓಡಾಡುತ್ತಿದ್ದ ಮಹಿಳಾ ಪೋಲೀಸನವರನ್ನು ಕಂಡು "ಆರೋಗ್ಯವನ್ನು ಹೊರ ಹೊಮ್ಮುವ ಹೆಣ್ಣೊಂದು, ಯಜಮಾನಿಕೆಯನ್ನು ಮೆರೆವ ಗಂಡು ಕುದುರೆಯ ಮೇಲೆ ಕುಳಿತು ಸವಾರಿ ಮಾಡುವಾಗ ಕಾಣುವ ದೃಶ್ಯ ಮನಸ್ಸನ್ನು ಕದಡದಿರುತ್ತದೆಯೇ"!? [8] ಎಂದು ಹೇಳುವ ಮಾತಿನಲ್ಲಿ ಪುರುಷ ಪ್ರಧಾನ ಸಮಾಜದ ವಿರುದ್ಧ ದನಿಯಂತೆ ಗೋಚರಿಸುತ್ತದೆ.

ಕಿಂಗ್ಸ್‌ಮೀಡ್ ಕ್ರಿಕೆಟ್ ಮೈದಾನದಲ್ಲಿ ಸಾಂಸ್ಕೃತಿಕ ಪ್ರದರ್ಶನ ನೀಡುವ ವೇದಿಕೆಯಲ್ಲಿದ್ದ ಇದ್ದ ಊಟ ತಿಂಡಿ ಸ್ಟಾಲ್‌ಗಳಲ್ಲಿ ಇವರುಗಳು ಮಧ್ಯಾಹ್ನದ ಊಟವನ್ನು ಮಾಡುತ್ತಿದ್ದರು. ಊಟದ ಡಿಮ್ಯಾಂಡನ್ನು ನೋಡಿಕೊಂಡು ಊಟದ ಬೆಲೆ ಹೆಚ್ಚುವುದರ ಜೊತೆಗೆ ಪ್ರಮಾಣವೂ ಕಡಿಮೆ ಯಾಗುತ್ತಿತ್ತು ಎಂದು ಹೇಳುವಾಗ ಲೇಖಕರು "ಇಷ್ಟಕ್ಕೂ ಅಲ್ಲಿ ಊಟದ ಸ್ಟಾಲ್‌ಗಳನ್ನಿಟ್ಟು ಕೊಂಡಿದ್ದ ಬಹುತೇಕರು ಭಾರತೀಯರೇ, ಅಂದ ಮೇಲೆ ಈ ರೀತಿ ಊಟದ ಡಿಮ್ಯಾಂಡ್ ನೋಡಿಕೊಂಡು ಊಟದ ಬೆಲೆಯನ್ನು ಏರಿಸದಿರುತ್ತಾರೆಯೇ?" [9] ಎಂದು ಭಾರತೀಯರ ಮನೋಭಾವವನ್ನು ವ್ಯಂಗವಾಗಿ ಆಡಿತೋರಿಸಿದ್ದಾರೆ.

---

4. 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಪುಟ- 12
5. -ಅದೇ- ಪುಟ -14
6. -ಅದೇ-ಪುಟ -30
7. -ಅದೇ- ಪುಟ -52
8. -ಅದೇ- ಪುಟ -29
9. -ಅದೇ- ಪುಟ -45

ದಕ್ಷಿಣ ಆಫ್ರಿಕಾದ ಸಮಸ್ಯೆಗಳ ಬಗ್ಗೆ ಈ ಕೇರಿ ನಮ್ಮದು... ಈ ಭೂಮಿ ನಮ್ಮದು! ಎಂಬ ಶೀರ್ಷಿಕೆಯನ್ನೊಳಗೊಂಡ ಅಧ್ಯಾಯದಲ್ಲಿ ದಕ್ಷಿಣ ಆಫ್ರಿಕಾದಲ್ಲಿ ವಾಸ ಮಾಡುತ್ತಿರುವ ಕರಿಯರು, ಬಿಳಿಯರು, ಕಲರ್ಡ್ ಹಾಗೂ ಭಾರತೀಯರ ಬಗ್ಗೆ ವಿವರಿಸುತ್ತಿರುವಾಗ 'ಬಿಳಿಯರೆಂದರೆ ಬ್ರಿಟಿಷರು ಅಥವಾ ಯುರೋಪಿಯನ್ನರು. ಇವರು ಡಚ್, ಜರ್ಮನ್ ಹಾಗೂ ಫ್ರೆಂಚ್ ಭಾಷೆಗಳನ್ನು ಮಾತನಾಡಿದರೂ ಇವರ ಪ್ರಮುಖ ಅಸ್ತ್ರ ಇಂಗ್ಲೀಷ್ ಕೆಲವರು ಈ ಇಂಗ್ಲೀಷ್‌ನಿಂದಲೇ ಭಾರತವನ್ನು ಆಳಿದರು. ಇಂದಿಗೂ ಇಂಗ್ಲೀಷ್ ಮೂಲಕವೇ ಆಳುತ್ತಿದ್ದಾರೆ"[10] ಎಂದು ಮಾರ್ಮಿಕವಾಗಿ ನುಡಿದಿದ್ದಾರೆ. ಉದಾ- ನಮ್ಮ ದೇಶವನ್ನೇ ತೆಗೆದು ಕೊಂಡರು ನಾವು ಸ್ವಾತಂತ್ರ್ಯ ಹೊಂದಿ ಅರ್ಧ ಶತಮಾನ ಕಳೆದಿದ್ದರು ಈ ಇಂಗ್ಲೀಷ್ ಭಾಷೆಯ ದೌರ್ಜನ್ಯದಿಂದ ಬಿಡಿಸಿಕೊಳ್ಳಲಾಗಿಲ್ಲವೆಂಬುದು ಅವರ ಮಾತುಗಳಲ್ಲಿ ವ್ಯಕ್ತವಾಗಿದೆ.

ಮೂಸಾ ದೇಸಾಯಿ ಎಂಬುವನ ಪರಿಚಯವಾಗಿ ನಮ್ಮಲ್ಲಿಯ ಜಾತಿ, ಅಲ್ಲಿಯ ವರ್ಣಭೇದ, ಗಾಂಧಿ, ನೆಲ್ಸನ್‌ಮಂಡೇಲಾ ಮುಂತಾದ ವಿಚಾರಗಳನ್ನು ಚರ್ಚೆ ಮಾಡುತ್ತಾ ಆತನ ಅರಿವಿನ ಆಳವನ್ನು ಕಂಡು "ಡರ್ಬಾನ್‌ನಲ್ಲಿ ಹಿಂದೂ ಮಹಾಸಾಗರದ ದಂಡೆಯ ಮೇಲೆ ನಮಗೆ ಮೂಸಾ ದೇಸಾಯಿ ಎಂಬ ಸಾಬಿಯಿಂದ ಜ್ಞಾನೋದಯವಾಗಿತ್ತು" ಎಂಬ ಮಾತಿನಲ್ಲಿ ನಮ್ಮ ದೇಶದಲ್ಲಿ ಎಷ್ಟೋ ದಲಿತ ಲೋಕಸಭಾ ಸದಸ್ಯರು, ಮಂತ್ರಿ, ಶಾಸಕರಿದ್ದರೂ ಅವರು ತಿಳಿದು ಕೊಳ್ಳದ ಎಷ್ಟೋ ವಿಚಾರವನ್ನು ವಿದೇಶದಲ್ಲಿರುವ ಮೂಸಾದೇಸಾಯಿ ತಿಳಿದುಕೊಂಡಿದ್ದಾನೆ. ಆತನಿಂದ ನಮ್ಮ ದೇಶದ ವಿಚಾರವನ್ನು ನಾವು ತಿಳಿದು ಕೊಳ್ಳಬೇಕಾಗಿದೆ ಎಂಬ ವ್ಯಂಗಭಾವ ಈ ಮಾತುಗಳಲ್ಲಿ ಅಡಕವಾಗಿದೆ.

ದ್ವಾರಕಾನಾಥರ ಸೂಕ್ಷ್ಮಪ್ರೌಢಿಮೆಗೆ ಅಸಂಖ್ಯ ನಿದರ್ಶನಗಳಿವೆ ಅವರ 'ಅಮೆರಿಕಾ ಆ ಮುಖ' ಕಥನದಲ್ಲಿ, ಅಮೆರಿಕ ಪ್ರಯಾಣಕ್ಕೂ ಮೂರ್ನಾಲು ವಾರದ ಹಿಂದೆ ಲಂಡನ್ನಿನ ಹೀತ್ರೂ ವಿಮಾನ ನಿಲ್ದಾಣದ ಮೂಲಕ ಅಮೆರಿಕಾಗೆ ಹೋಗುವ ವಿಮಾನಗಳಲ್ಲಿ ಆಕ್ವಿಡ್ ಬಾಂಬ್‌ನ್ನು ಟೆರರಿಸ್ಟರು ಇಟ್ಟರೆಂಬ ಸುದ್ದಿಗೆ ಹೀಗೆ ಪ್ರತಿಕ್ರಿಯಿಸುತ್ತಾರೆ 'ಏನನ್ನೂ ಸ್ಫೋಟಿಸದೇನೆ ವಿಮಾನಯಾನದ ಜಗತ್ತನ್ನು ತಲ್ಲಣಗೊಳಿಸಿದ್ದರು. [11] ವಿಮಾನದಲ್ಲಿ ಪಯಣಿಸುವಾಗ ಹಂದ್ರಾಳರ 'ಒಕ್ಕಲ ಒನಪು' ಓದುತ್ತಾ "ನನ್ನ ಹೊತ್ತ ವಿಮಾನ ಪಶ್ಚಿಮದ ಕಡೆ ಹೊರಟರೆ 'ಒಕ್ಕಲ ಒನಪು' ನನ್ನನ್ನು ನನ್ನ ನೆಲಕ್ಕೆ ಎಳೆತರುತ್ತಿತ್ತು [12] ಎಂಬ ಮಾತಿನಲ್ಲಿ ದೇಶೀಯತೆಯ ಭಾವವಿದೆ. ಪ್ರಯಾಣದ ಹಾದಿಯಲ್ಲಿ ಅಮೆರಿಕಾ ತಲುಪುವ ಮುನ್ನವೇ ಲಂಡನ್ನಿನ ಹೀಥ್ರೂ ವಿಮಾನ ನಿಲ್ದಾಣದಲ್ಲಿ ಇಳಿದು ಕಾಲಹರಣ ಮಾಡುವಾಗ ಹೊರಗೆ ಕೆಲವು ಹಕ್ಕಿಗಳು ಇವರ ಕಣ್ಣಿಗೆ

---

10 . ಗಾಂಧಿ ಮೆಟ್ಟಿದ ನಾಡಿನಲ್ಲಿ : ಪುಟ 47

11. ಅಮೆರಿಕಾ ಆ ಮುಖ ಪುಟ -1

12. -ಅದೇ- ಪುಟ- 5

ಜೀಳುತ್ತವೆ. ಆ ಹಕ್ಕಿಗಳ ಬಗ್ಗೆ ದ್ವಾರಕಾನಾಥ್ ಬರೆಯುವುದು ಅವು ನಮ್ಮೂರಿನ ಹಕ್ಕಿಗಳ ಭಾಷೆಯಲ್ಲೇ ಚಿಲಿಪಿಲಿಗುಟ್ಟುತ್ತಿದ್ದ ರಿಂದ ಲಂಡನ್ನಿನ ಇಂಗ್ಲೀಷ್ ಈ ಹಕ್ಕಿಗಳ ಮೇಲಿ ಪ್ರಭಾವ ಬೀರಿಲ್ಲವೆಂಬುದು ಖಚಿತವಾಯಿತು....![13] ಹೀತ್ರೂ ವಿಮಾನ ನಿಲ್ದಾಣದಲ್ಲಿ ಅಮೆರಿಕಾ ವಿಮಾನ ಕ್ಕಾಗಿ ಕಾದು ಕುಳಿತಿದ್ದಾಗ, ಆ ವಿಮಾನ ನಿಲ್ದಾಣದಲ್ಲಿ ಅವರ ಸ್ಥಿತಿಯ ಬಗ್ಗೆ ಬರೆಯುತ್ತಾ "ನನ್ನ ಹುಟ್ಟೂರು ಕೋಲಾರ; ಅದಕ್ಕಿಂತಲೂ ತೀರ ದೊಡ್ಡದಾಗಿರಬಹುದಾದ ಹೀತ್ರೂ ವಿಮಾನನಿಲ್ದಾಣದ ನಾಲ್ಕನೇ ಟರ್ಮಿನಲ್‌ನಲ್ಲಿ ನಾನು ಗೌರವಾನ್ವಿತ ಬಂದಿಯಾಗಿದ್ದೆ"[14] ಎಂದಿದ್ದಾರೆ.

ಇನ್ನು ಅದೇ ಕಥನದಲ್ಲಿ ಅಕ್ಕ ಸಮ್ಮೇಳನದಲ್ಲಿ ಭಾಗವಹಿಸಿ ಅಲ್ಲಿ ಶ್ರೀರವಿಶಂಕರ ಗುರೂಜಿಯವರ ಉಪನ್ಯಾಸ ಡಿಸ್ಕೌಂಟ್ ರೇಟಿನಲ್ಲಿ ನಡೆಯುತ್ತಿರುವಾಗಿನ ವಿಚಾರವನ್ನು ಬರೆಯುತ್ತಾ 'ಉಪನ್ಯಾಸ ಕೇಳಲು ಬಲಿಗಾಲಲ್ಲಿ ಬಂದ ಜನ ಸಭಾಂಗಣದಲ್ಲಿ ತುಂಬಿದ್ದರೆ, ಹೊರಗೆ ಶ್ರೀಶ್ರೀಶ್ರೀರವರ ದೊಡ್ಡ ಫೋಟೋ ಮುಂದೆ ಚಪ್ಪಲಿ ಬೂಟುಗಳ ರಾಶಿಯೋ ರಾಶಿ'![15] ಎಂದು ಬಹಳ ಮಾರ್ಮಿಕವಾಗಿ ನುಡಿದಿದ್ದಾರೆ. ಶಿಕಾಗೋ ನಗರಕ್ಕೆ ಹೋದಾಗ ಆ ನಗರದ ಹಿನ್ನೆಲೆಯನ್ನು ತಿಳಿಸುತ್ತಾರೆ. ಅಲ್ಲಿ ಬಿಳಿ ಯಜಮಾನರಿಂದ ತಪ್ಪಿಸಿಕೊಂಡು ಬಂದ ಕರಿಯರು ಕಾರ್ಖಾನೆಗಳಲ್ಲಿ, ಸ್ಟೀಲ್ ಮಿಲ್ಲುಗಳಲ್ಲಿ, ಕಸಾಯಿಖಾನೆಯಲ್ಲಿ ದುಡಿಯುತ್ತಾರೆ. ತಮ್ಮ ಬಡತನದ ರೇಖೆಗಿಂತಲೂ ಕೆಳಗಿದ್ದ ಇವರುಗಳು ತಮ್ಮ ನೋವುಗಳನ್ನು ಮರೆಯಲೂ ಸಂಗೀತದ ಮೊರೆ ಹೋಗುತ್ತಾರೆ ಎಂದು ಆ ಕರಿಯರ ಕಂಠದಲ್ಲಿನ ಮಾಧುರ್ಯವನ್ನು ಸೂಕ್ಷ್ಮವಾಗಿ ಗಮನಿಸಿ ತಮ್ಮ ಮಾತುಗಳಲ್ಲಿ ಹೀಗೆ ವ್ಯಕ್ತ ಪಡಿಸಿದ್ದಾರೆ. 'ಈ ಕಪ್ಪು ಜನರ ಕಂಠದಲ್ಲಿ ಎಷ್ಟೊಂದು ಕೋಗಿಲೆಗಳು ನಲಿಯುತ್ತವೆ. [16] ಅಮೆರಿಕಾ ಆ ಮುಖ ಕಥನದಲ್ಲಿ ಟಾಯ್ಲೆಟ್ ಪೇಪರಿನ ವಿಚಾರವನ್ನು ಹೇಳುವಾಗ 'ಅಂದ ಹಾಗೆ, ಈ ಹಾಳಾದ ದೇಶದಲ್ಲಿ ಇಷ್ಟೆಲ್ಲಾ ಸರೋವರಗಳಿವೆ, ಬೇಕಾದಷ್ಟು ನೀರಿದೆ, ಈ ಜನ ನೆಮ್ಮದಿಯಾಗಿ ನೀರಲ್ಲಿ ತೊಳಕೊಳ್ಳದೆ ಜ್ಞಾನದೇವತೆಯಾದ ಕಾಗದಕ್ಕೆ ಯಾಕೆ ಮೊರೆ ಹೋದರು.......ಎಂದು ಹೇಳುತ್ತಾ ಇದಕ್ಕಾಗಿ ನಾಶ ಗೊಳ್ಳುತ್ತಿರುವ ಕಾಡುಗಳು ಅದರ ಜೊತೆ ನಮ್ಮ ಮಕ್ಕಳಿಗೆ ವಿದ್ಯೆ ಕಲಿಯಲಿಕ್ಕೆ ಪುಸ್ತಕವಿಲ್ಲದಿರುವಾಗ ಆ ದೇಶದಲ್ಲಿ ದಿನನಿತ್ಯ ಟಾಯ್ಲೆಟ್, ಅಡಿಗೆಮನೆಗೆ ಬಳಸಲ್ಪಡುವ ಪೇಪರಿನ ಬಗ್ಗೆ ಪ್ರತಿಕ್ರಿಯಿಸುತ್ತಾ "ನಮ್ಮ ಹಳ್ಳಿಗಳಲ್ಲಿ ಇಂದಿಗೂ 32 ಪೇಜಿನ ನೋಟ್‌ಬುಕ್ ಕೊಳ್ಳಲೂ ಪರದಾಡುವ ಮಕ್ಕಳ ಚಿತ್ರ ನಮ್ಮ ಕಣ್ಣ ಮುಂದೆ ಬರುತ್ತಿತ್ತು." [17] ಎಂದು ತಮ್ಮ ಸೂಕ್ಷ್ಮ ಚಿಂತನೆಯನ್ನು ಈ ಮಾತುಗಳಲ್ಲಿನ ವ್ಯಕ್ತಪಡಿಸಿದ್ದಾರೆ.

---

13. ಅಮೆರಿಕಾ ಆ ಮುಖ ಪುಟ -8
14. -ಅದೇ-ಪುಟ 1
15. -ಅದೇ-ಪುಟ -18
16. -ಅದೇ- ಪುಟ 67
17. -ಅದೇ-ಪುಟ -86, 87

ಡೆಲ್ಲಾಸ್‌ನ ನಗರದಲ್ಲಿ ಹೋಮ್‌ಲೆಸ್‌ಗಳು ಅವರ ಸ್ಥಿತಿ ಅವರಿಗಾಗಿ ತೆರದಿರುವ ಗಂಜಿ ಕೇಂದ್ರಗಳು, ಗಲೀಜಿನಲ್ಲಿ ಮಲಗಿ ಅಲ್ಲಿಯೇ ಮಲಮೂತ್ರವನ್ನು ಮಾಡಿಕೊಂಡಿದ್ದಸಹನೀಯ ವಿಚಾರವನ್ನು ಬರೆಯುತ್ತಾ 'ನನಗೆ ನಿಜಕ್ಕೂ ಅಮೆರಿಕದ ಇನ್ನೊಂದು ಮುಖ ನೋಡಿದ ಅನುಭವವಾಯಿತು' [18] ಎಂಬ ಮಾತಿನಲ್ಲಿ ನಾವು ತಿಳಿದದ್ದಕ್ಕಿಂತಲೂ ಅಮೆರಿಕಾ ಭಿನ್ನವಾಗಿದೆ ಎಂಬ ಅರ್ಥ ಹೊರಹೊಮ್ಮಿದೆ.

ಅಮೆರಿಕಾ ದೇಶದಲ್ಲಿ ಜನ ಯಂತ್ರಗಳಲ್ಲಿ ಕೆಲಸ ಮಾಡುವ ವಿಚಾರದ ಬಗ್ಗೆ ಬರೆಯುತ್ತಾರೆ "ನನಗೇಕೋ ಈ ದೇಶದಲ್ಲಿ ಸ್ವಾತಂತ್ರ್ಯವೇ ಇಲ್ಲವೇನೋ ಎನಿಸುತ್ತೆ. ಒಮ್ಮೊಮ್ಮೆ ನಾವು ನಮಗಿರುವ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಳ್ಳೋದನ್ನು ಕಂಡರೆ ಇಲ್ಲಿರುವುದೇ ನಿಜವಾದ ಸ್ವಾತಂತ್ರ ಎನಿಸುತ್ತವೆ [19] ಎಂದು ತೌಲನಿಕವಾಗಿ ನುಡಿಯುವ ಮಾತಾಗಿದೆ.

ಲಿಂಚಿಂಗ್ ವಿಚಾರವಾಗಿ ಹೇಳುತ್ತಾ ಕರಿಯನಾದ ಜೆಸ್ಸಿ ವಾಷಿಂಗ್‌ಟನ್ ನೇಣಿಗೇರಿಸಿ ಸುಡಲಾಗಿದ್ದ ಮರವನ್ನು ನೋಡಿದ ನಂತರ ಅಲ್ಲೆಲ್ಲಾ ಅನೇಕ ಕಲ್ಲುಗಳ ಮೇಲೆ ಆ ಊರಿನಲ್ಲಿ ದಾನಧರ್ಮ ಮಾಡಿದವರ ಹೆಸರುಗಳನ್ನು ಕೆತ್ತಲಾಗಿತ್ತು. 'ನಾನು ಅವುಗಳ ನಡುವೆ ಜೆಸ್ಸಿವಾಷಿಂಗ್‌ಟನ್ ಹೆಸರಿದೆಯೇನೋ ಎಂದು ಹುಡುಕುತ್ತಿದ್ದೆ' [20] ಎಂದು ಹೇಳಿರುವ ಮಾತಿನಲ್ಲಿ ಸೂಕ್ಷ್ಮ ಪ್ರೌಢಿಮೆಗಳು ಕಂಡು ಬರುತ್ತವೆ. ಇವರ ಅಮೆರಿಕಾ ಆ ಮುಖ ಕಥನದಲ್ಲಿ ಅಲ್ಲಲ್ಲಿ ಹಾಸ್ಯವೂ ಕೂಡ ಹೊಕ್ಕಿದೆ. ಅದಕ್ಕೆ ಕೆಲವು ನಿದರ್ಶನವೆಂದರೆ ಹೀತ್ರೂ ವಿಮಾನ ನಿಲ್ದಾಣದಲ್ಲಿ ಅಮೆರಿಕ ವಿಮಾನಕ್ಕಾಗಿ ಕಾಯುತ್ತಿರುವಾಗ ಲಂಡನ್ನಿನ ಭೀಕರ ಚಳಿಯಿಂದಾಗಿ ಇವರ ಮೂಗು ಒಂದೇ ಸಮನೆ ಸೋರತೊಡಗಿತು. ಆ ನೆಗಡಿ ಹಾಗೂ ಚಳಿಯಿಂದ ಪಾರಾಗಲು ಕಾಫಿ ಕುಡಿಯೋಣವೆನಿಸಿ ಕಾಫಿ ಬಾರ್‌ಗೆ ಹೋಗಿ ಕುಳಿತು ಕಾಫಿಯ ಬೆಲೆ ನೋಡಿ ಗಾಬರಿಗೊಂಡು ಅದನ್ನು ರೂಪಾಯಿಯಲ್ಲಿ ಲೆಕ್ಕ ಹಾಕಿ ಒಂದೆಡೆ ಮನಸ್ಸು ಹಿಂದೇಟು ಹಾಕಿದರು "ನನ್ನ ಮೂಗಿನೊಳಗಿರುವ ನೆಗಡಿ ಕೇಳಬೇಕಲ್ಲ. ಐನೂರೂ ಆದರೂ ಚಿಂತೆಯಿಲ್ಲ, ಮೊದಲು ಬಿಸಿ ಬಿಸಿ ಕಾಫಿ ಕುಡಿ ಎನ್ನುವಂತೆ ಒತ್ತಾಯಿಸಿತು. ಕೊನೆಗೆ ನಾಲ್ಕು ಡಾಲರ್ ಕೊಟ್ಟು ಕೊಂಡ ಕಾಫಿ ಕುಡಿದರೆ ಎಲ್ಲಿ ಮುಗಿದುಹೋಗುತ್ತೋ ಅಂತ ಬಾಯಲ್ಲಿ ವಾಸನೆ ಹೀರುವಂತೆ ಇಷ್ಟಿಷ್ಟೇ ಹೀರತೊಡಗಿದೆ" [21] ಎಂಬ ಹಾಸ್ಯ ಲೇಪಿತ ಮಾತುಗಳಿಂದ ಆ ಸನ್ನಿವೇಶವನ್ನು ಬರೆಯುತ್ತಾರೆ.

ಯಾರ್ಕ್ ಎಂಬ ಊರಿನಲ್ಲಿ ಲೇಖಕರು ಹಾಗೂ ಅವರ ಸ್ನೇಹಿತ ರೆಡ್ಡಿಯವರು 'ಬಡ್ಜೆಟ್ ಇನ್' ಎಂಬ ಹೋಟೇಲಿನಲ್ಲಿ ರೂಮು ಪಡೆದು ಮಲಗಿರುವಾಗ ಇವರಿಗೆ ಎಚ್ಚರವಾದ

---

18. ಅಮೆರಿಕಾ ಆ ಮುಖ ಪುಟ -92
19. -ಅದೇ- ಪುಟ -94
20. -ಅದೇ- ಪುಟ -128
21. -ಅದೇ- ಪುಟ -9

ಸನ್ನಿವೇಶವನ್ನು ಈ ರೀತಿ ಬರೆಯುತ್ತಾರೆ. 'ನಡುರಾತ್ರಿಯಲ್ಲಿ ಏನೋ ದೊಡ್ಡ ಪ್ರಾಣಿಯ ಆರ್ಭಟ ಕೇಳಿದಂತಾಗಿ ನಾನು ಗಾಬರಿ ಬಿದ್ದು ನಿದ್ದೆಯಿಂದ ಎದ್ದೆ. ರೆಡ್ಡಿ ಗೊರಕೆ ಹೊಡೆಯುತ್ತಿದ್ದ'! [22] ರೆಡ್ಡಿಯ ಗೊರಕೆಯನ್ನು ಪ್ರಾಣಿಯ ಆರ್ಭಟಕ್ಕೆ ಹೋಲಿಸಿ ಅದರಿಂದ ಇವರ ನಿದ್ದೆ ಹಾಳಿಹೋದ ಪ್ರಸಂಗವನ್ನು ತಿಳಿಸಿದ್ದಾರೆ.

ನಯಾಗರ ಫಾಲ್ಸ್‌ಗೆ ಪ್ರಯಾಣಿಸುವಾಗ ಮಾರ್ಗಮಧ್ಯದ ನ್ಯೂಯಾರ್ಕ್ ರಾಜ್ಯದ ಕಾರ್ನಿಂಗ್ ಎಂಬ ಊರಿನಲ್ಲಿ ಊಟ ಮುಗಿಸಿ ತಮ್ಮ ಪ್ರಯಾಣವನ್ನು ಮುಂದುವರೆಸುತ್ತಾರೆ. ಹೊಟ್ಟೆ ತುಂಬಿದ್ದರಿಂದ ಕಾರಿನಲ್ಲಿ ಕುಳಿತ ಮೇಲೆ ಲೇಖಕರಿಗೆ ಸಣ್ಣ ನಿದ್ದೆ ಆವರಿಸುತ್ತದೆ. ಬಫೆಲೋ ಎಂಬ ಊರು ಬರಲಾಗಿ ಅವರ ಸ್ನೇಹಿತ 'ಬಫೆಲೋ ಬಂತು ಎಂದು ಕೂಗಿದ್ದರಿಂದ 'ಇಂಡಿಯಾದಲ್ಲಿ ನಮ್ಮ ಕಾರುಗಳಿಗೆ ಅಡ್ಡ ಬರುವ ಎಮ್ಮೆಗಳು ನೆನಪಾಗಿ 'ಎಮ್ಮೇನಾ' ಎಂದು ಗಾಬರಿಯಿಂದ ಕಣ್ಣು ಬಿಟ್ಟೆ'..... ಆ ಊರನ್ನು ಸಮೀಪಿಸುತ್ತಿರುವಾಗ 'ಟ್ರೈ ಅವರ್ ಒರಿಜಿನಲ್ ಹಾಟ್ ಬಫೆಲೋ ವಿಂಗ್ಸ್' ಎಂಬ ದೊಡ್ಡ ಬೋರ್ಡುಗಳನ್ನು ನೋಡಿ 'ಎಮ್ಮೆಗೆ ರೆಕ್ಕೆಗಳಿರುತ್ತವೆಯೇ, ನನ್ನ ಜಿ.ಕೆ. ಬಗ್ಗೆ ಅನುಮಾನ ಶುರುವಾಯಿತು' [23] ಎಂದು ಆ ಪ್ರಸಂಗವನ್ನು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ.

ಅದೇ ರೀತಿ ಶಿಕಾಗೋ ಹೋಟೆಲ್ ರೂಮಿನಲ್ಲಿ ಇವರ ಸ್ನೇಹಿತ ಇನ್ನೂ ಮಲಗಿದ್ದರಿಂದ ತಮ್ಮ ಅಡ್ವೋಕೇಟ್ ಕೋಲಿಗ್ ಲಕ್ಷ್ಮೀಯವರಿಗೆ ಫೋನ್ ಮಾಡುವ ಸಲುವಾಗಿ ಅವರ ಸ್ನೇಹಿತನಿಗೆ ತೊಂದರೆ ಯಾಗುತ್ತದೆಂದು ಸ್ನೇಹಿತನ ಸೆಲ್ ಫೋನ್ ತೆಗೆದುಕೊಂಡು ರೂಮಿನ ಹೊರಗೆ ಕಾರಿಡಾರ್‌ನಲ್ಲಿ ಮಾತನಾಡುತ್ತಾ ಮುನ್ನಡೆಯುತ್ತಾರೆ. ಮಾತು ಮುಗಿದು ರೂಮಿಗೆ ಹಿಂತಿರುಗಲೂ ನೋಡಿದರೆ ರೂಮಿನ ಗುರುತು ಸಿಗದೇ ಪೇಚಿಗೆ ಸಿಕ್ಕಿ ಹಾಕಿಕೊಳ್ಳುವ ಪ್ರಸಂಗವನ್ನು ನವಿರಾದ ಹಾಸ್ಯದಿಂದ ಹೀಗೆ ಬರೆಯುತ್ತಾರೆ 'ರೂಮಿನ ಕಡೆಗೆ ಹಿಂದಿರುಗಿದೆ, ಆಶ್ಚರ್ಯ! ಎಲ್ಲಾ ರೂಮುಗಳು ಒಂದೇ ರೀತಿ ಇವೆ. ಎಲ್ಲಾ ರೂಮುಗಳ ಬಾಗಿಲು ಹಾಕಿದೆ! ನನಗೆ ನಮ್ಮ ರೂಂ ನಂಬರ್ ಗೊತ್ತಿಲ್ಲ. ರೆಡ್ಡಿಯ ಸೆಲ್‌ಫೋನ್ ನನ್ನ ಕೈಯಲ್ಲೇ ಇದೆ. ನನ್ನ ಕೈಯಲ್ಲಿ ಬೀಗದ ಕೈ ಕೂಡ ಇಲ್ಲ. ಎಲ್ಲಾ ರೂಮುಗಳ ಬಳಿಯೂ ಸುಳಿದಾಡಿದೆ. ನನ್ನ ರೂಮಿನ ಗುರುತು ಸಿಗುತ್ತಿಲ್ಲ. ಅಂದಾಜಿನ ಮೇಲೆ ಯಾವದೋ ರೂಮನ್ನು ತಟ್ಟಿದೆ, ಒಳಗಡೆಯಿಂದ ಎಸ್.... ಹೂ ಈಸ್ ದಟ್..... ಅಂತ ಯಾವನೋ ಕಿರುಚಿದ...........ಮಗದೊಂದು ರೂಮಿನಲ್ಲಿ ಲಾಂಡ್ರಿ ಬಟ್ಟೆ ಕೊಡಲು ಬಂದರು...ಕೊನೆಗೆ ಆತಂಕದಿಂದ ಕೆಳಗೆ ಓಡಾಡುವವರನ್ನು ಕೋತಿಯಂತೆ ನೋಡುತ್ತಾ ನಿಂತೆ. 'ಏ ದ್ವಾರಿ ಅಲ್ಲೇನೋ ಮಾಡ್ತೀಯಾ... ' ಅಂತ ರೆಡ್ಡಿ ಹಿಂದಿನಿಂದ ಕೂಗಿದ ಹಿಂದೆ ತಿರುಗುತ್ತೇನೆ ಅದೇ ನಮ್ಮ ರೂಮು! [24] ಎಂದು ಹೋಟೆಲಿನಲ್ಲಿ ತಮಗಾದ

22. ಅಮೆರಿಕಾ ಆ ಮುಖ ಪುಟ- 32
23. -ಅದೇ- ಪುಟ -40
24.-ಅದೇ-ಪುಟ -49

ಅನುಭವವನ್ನು ಹಾಸ್ಯಮಯವಾಗಿ ಬರೆಯುತ್ತಾರೆ.

ಬೋರ್ಡಿಂಗ್ ಪಾಸ್ ತೆಗೆದುಕೊಳ್ಳುವ ಪ್ರಸಂಗದಲ್ಲಿ ಲೇಖಕರಿಗೆ ಕಂಪ್ಯೂಟರ್ ಬಳಕೆ ಗೊತ್ತಿಲ್ಲದೆ ತಬ್ಬಿಬ್ಬಾಗಿ ನಿಂತಿದ್ದಾಗ ಅಲ್ಲಿನ ಸೆಕ್ಯೂರಿಟಿ ಹೆಣ್ಣು ಮಗಳು 'ಕ್ಯಾನ್ ಐ ಹೆಲ್ಪ್ ಯು ಸರ್' ಎಂದು ಕೇಳಿ ಮಗುವಿನ ಕೈ ಹಿಡಿದು ಸ್ಲೇಟಿನ ಮೇಲೆ ಅಕ್ಷರ ತಿದ್ದಿಸುವಂತೆ ಇವರ ಕೈ ಹಿಡಿದು ಕಂಪ್ಯೂಟರ್ ಸ್ವಿಚ್‌ಗಳನ್ನು ಬತ್ತಿಸಿ ಬೋರ್ಡಿಂಗ್ ಪಾಸ್ ತೆಗೆದುಕೊಟ್ಟದ್ದನ್ನು ಬರೆಯುತ್ತಾ 'ನನ್ನ ಕೈಕುಲುಕಿ "ಹ್ಯಾಪಿ ಜರ್ನಿ ಸಾರ್" ಎಂದು ನಗುತ್ತಾ ಒಂದೇ ನಿಮಿಷದಲ್ಲಿ ಮಾಯವಾದಳು ಆ ನಿಮಿಶಾಂಬ'! [25] ಎಂದಿದ್ದಾರೆ.

ಅಕ್ಕ ಸಮ್ಮೇಳನದಲ್ಲಿ ಭೋಜನ ವ್ಯವಸ್ಥೆಯ ಬಗ್ಗೆ ವ್ಯಂಗವಾಗಿ ಹೀಗೆ ಬರೆಯುತ್ತಾರೆ. 'ಕರ್ನಾಟಕದ ಸಂಸ್ಕೃತಿ ಬಿಂಬಿಸುವ ಈ ಸಮ್ಮೇಳನದಲ್ಲಿ ಆಂಧ್ರದವರು ಅಡಿಗೆ ಕಾಂಟ್ರಾಕ್ಟ್ ಪಡೆದು ಆಂಧ್ರದ ಗೋಂಗೂರ, ಪಪ್ಪುಗಳನ್ನು ಬಡಿಸಿ ಕನ್ನಡಿಗರ ಮಾತಿಗೆ ಆಂಧ್ರದ ಸವಿಯನ್ನು ಪೂಸುತ್ತಿದ್ದರು! [26]

ನಯಾಗರ ಫಾಲ್ಸ್‌ನ ಸೌಂದರ್ಯವನ್ನು ನೋಡಿ ಅತ್ಯಂತ ಭಾವುಕರಾಗಿ ಬರೆಯುತ್ತಾರೆ. 'ಆ ಅಪರಿಮಿತ ಆನಂದವನ್ನು ಅನುಭವಿಸಿ ಹೊರಬಂದ ಮೇಲೆ ನಾವು ನಮ್ಮ ಸಾವನ್ನು ಡಿಕ್ಲೇರ್ ಮಾಡಬಹುದು ಎನಿಸಿ ಬಿಡುತ್ತದೆ.......ಈ ಇಡೀ ಫಾಲ್ಸ್ ಅನ್ನು ತನ್ನ ಬೊಗಸೆಯಲ್ಲಿ ಹಿಡಿದು ಇಡೀ ಭೂಮಂಡಲಕ್ಕೆ ತೋರಿಸುತ್ತಾ ಜಗತ್ತೆಲ್ಲಾ ಸುತ್ತುವ ಶಕ್ತಿಯಿರುವುದು ಆ ಭಗವಂತನಿಗೆ ಮಾತ್ರ! ಈ ಕಾರಣಕ್ಕಾದರೂ ಆ ಭಗವಂತ ಅಸ್ತಿತ್ವದಲ್ಲಿರಬಾರದಿತ್ತೇ ಎಂದು ಮನಸ್ಸು ದೇವರ ಅಸ್ತಿತ್ವವನ್ನು ಬಯಸಿತು.' [27]

ಕ್ಯಾಲಿಫೋರ್ನಿಯಾ ಬಗ್ಗೆ ಬಹಳ ಗಂಭೀರವಾದ ವಿಷಯವನ್ನು ತಮ್ಮ ಮಾತುಗಳಲ್ಲಿ ಹೊರಹಾಕಿದ್ದಾರೆ. ಪ್ರಾಚೀನ ಕಾಲದ 'ಗೋಲ್ಡ್‌ರಶ್' ಸಿಲಿಕಾನ್ ವ್ಯಾಲಿ ಮತ್ತು ನೈಸರ್ಗಿಕ ಸಂಪತ್ತುಗಳಲ್ಲಿ ಸಿರಿ ಸಮೃದ್ಧಿಯನ್ನೇ ಸುರಿದುಕೊಂಡಿರುವ ಕ್ಯಾಲಿಫೋನಿಯಾಗೆ ಜಗತ್ತಿನ ಮೂಲೆ ಮೂಲೆಗಳಿಂದ ಜನ ಮುಕುರುತ್ತಾರೆ ಹಾಗೆ ನೋಡಿದರೆ ಕ್ಯಾಲಿಫೋನಿಯಾ ಸದಾ ಭೂಕಂಪದ ಭೀತಿಯಲ್ಲೇ ಜೀವಿಸುವ ಸಾಮ್ರಾಜ್ಯ, ಆದರೆ ದ್ವಾರಕಾಥ್ ಬರೆಯುತ್ತಾರೆ 'ಇಲ್ಲಿನ ಚಿನ್ನಕ್ಕಾಗಿ, ಸಂಪತ್ತಿಗಾಗಿ, ಹಣಕ್ಕಾಗಿ ಮುಗಿಬೀಳುವ ಜನಕ್ಕೆ ಸಾವಿನ ಅರಿವಿಲ್ಲವೆಂದಲ್ಲ, ಆದರೆ ಮನುಷ್ಯನ ಆಸೆಯ ಮುಂದೆ ಸಾವೂ ಸೊರಗಿದಂತೆ ಕಾಣುತ್ತದೆ..' [28]

---

25. ಅಮೆರಿಕಾ ಆ ಮುಖ ಪುಟ -114
26. -ಅದೇ- ಪುಟ -14
27 -ಅದೇ- ಪುಟ -44
28. -ಅದೇ- ಪುಟ -113

ಹಾಗೆಯೇ ರೆಡ್‌ವುಡ್ಸ್‌ನಲ್ಲಿನ ಸಸ್ಯ ಸಂಪತ್ತು 20 ಶತಮಾನಗಳಷ್ಟು ಹಳೆಯದಾದ 'ಮದರ್ ಟ್ರೀ' 'ಫಾದರ್ ಟ್ರೀ' ಅಲ್ಲಿನ ಗಿಡಮೂಲಿಕೆಗಳಿಂದ ಶ್ರೀಮಂತವಾಗಿರುವ ಪ್ರದೇಶ, ಪ್ರಾಣಿಪಕ್ಷಿ ಸಂಕುಲ, ಜಲಪಾತಗಳ ಬಗ್ಗೆ ಗಂಭೀರವಾಗಿ ಬರೆಯುತ್ತಾರೆ. 'ಈ ಮರಗಳನ್ನು ರಕ್ಷಿಸಲು ಜಗತ್ತಿನಾದ್ಯಂತ ಪರಿಸರವಾದಿಗಳು ಇಲ್ಲಿಗೆ ಬರುತ್ತಿದ್ದಾರೆ, ಈ ಬೃಹತ್ ಮರಗಳ ಕೆಳಗೆ ಟೆಂಟ್ ಹಾಕಿಕೊಂಡು ತಿರುಪತಿ, ಕಾಶಿ, ರಾಮೇಶ್ವರಕ್ಕೆ ಬಂದಂತೆ ಈ ಮರಗಳ ಉಳಿವಿಗಾಗಿ ಧ್ಯಾನಿಸುತ್ತಾರೆ' [29]

ಹೀಗೆ ದ್ವಾರಕಾನಾಥರ ಎರಡು ಪ್ರವಾಸ ಕಥನಗಳಲ್ಲಿನ ಭಾಷಾ ಶೈಲಿ ಲವಲವಿಕೆ ಯಿಂದಲೂ, ತುಂಟಾಟದಿಂದಲೂ, ನವಿರಾದ ಹಾಸ್ಯದಿಂದಲೂ, ವ್ಯಂಗ ಭರಿತವಾಗಿಯೂ, ಗಂಭೀರವಾಗಿಯೂ ಧ್ವನಿ ಸಂಪೂರ್ಣವಾಗಿಯೂ ಸೂಕ್ಷ್ಮ ಪ್ರೌಢಿಮೆಗಳಿಂದಲೂ ಕೂಡಿದ್ದಾಗಿದೆ.

29. ಅಮೆರಿಕಾ ಆ ಮುಖ ಪುಟ 111

## 8- ಸಮಾರೋಪ

ಪ್ರವಾಸ ಕಥನಗಳು ಸಾಮಾನ್ಯವಾಗಿ ಅನುಭವಗಮ್ಯವಾಗಿರುವಂತದ್ದು. ಪ್ರವಾಸ ಕಥನದಲ್ಲಿ ಕಥನ ಬರೆದವರು ತಾವು ನೋಡಿದ ಸ್ಥಳ ವಿವರಣೆಯನ್ನು ನೀಡುತ್ತಾ ಅದರ ಜೊತೆಗೆ ಸ್ವಲ್ಪ ಇತಿಹಾಸವನ್ನು ಬೆರೆಸಿ ಅಲ್ಲಿ ನಡೆದ ಕೆಲವು ಸನ್ನಿವೇಶ, ಘಟನೆಗಳನ್ನು ನಮ್ಮ ದೇಶದೊಂದಿಗೆ ತುಲನೆ ಮಾಡುವುದನ್ನು ಕಾಣುತ್ತೇವೆ. ಆದರೆ ದ್ವಾರಕಾನಾಥರ 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಹಾಗೂ 'ಅಮೆರಿಕ ಆ ಮುಖ' ಅವೆಲ್ಲಕ್ಕಿಂತಲೂ ಭಿನ್ನವಾಗಿದ್ದು ಒಂದು ತಾತ್ವಿಕ ಚೌಕಟ್ಟನ್ನು ಹಾಕಿಕೊಂಡಿರುವ ಪ್ರವಾಸ ಕಥನವಾಗಿದೆ.

ನಮಗೆ ಹೀಗಾಗಲೇ ತಿಳಿದಿರುವಂತೆ ದಕ್ಷಿಣ ಆಫ್ರಿಕಾದಲ್ಲಿ ವರ್ಣ ಭೇದವಿದೆ. ಇದೇ ರೀತಿ ಜಾತಿ, ಜನಾಂಗದ ಭೇದ ಭಾವ ಈ ವಿಶ್ವದ ಅನೇಕ ರಾಷ್ಟ್ರಗಳಲ್ಲಿದೆ. ಈ ಎಲ್ಲಾ ಭೇದಗಳನ್ನು ತೊಡೆದು ಹಾಕುವ ನಿಟ್ಟಿನಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಆಯೋಜಿಸಲಾಗಿದ್ದ ವಿಶ್ವ ವರ್ಣಭೇದ ವಿರೋಧಿ ಸಮಾವೇಶದಲ್ಲಿ ದ್ವಾರಕಾನಾಥರು ಪಾಲ್ಗೊಂಡು ಅಲ್ಲಿನ ಅನುಭವಗಳನ್ನು ಸೈದ್ಧಾಂತಿಕ ಹಿನ್ನೆಲೆಯೊಂದಿಗೆ ತಮ್ಮ ಪ್ರವಾಸ ಕಥನದಲ್ಲಿ ನಿರೂಪಿಸಿದ್ದಾರೆ. ಈ ಕಥನವು ಸತ್ಯ ಪ್ರತಿಪಾದನೆಗಾಗಿ ನಡೆದ ಹೋರಾಟದಂತಿರುವುದರಿಂದಲೂ ವರ್ಣಭೇದದ ವಿರುದ್ಧವಾಗಿ ಮೊದಲಿಗೆ ದನಿ ಎತ್ತಿ ಹೋರಾಟ ಮಾಡಿದ ವ್ಯಕ್ತಿ ಗಾಂಧೀಜಿ, ನೆಲ ದಕ್ಷಿಣ ಆಫ್ರಿಕಾ ಆಗಿರುವುದರಿಂದಲೂ, 'ಗಾಂಧಿ ಮೆಟ್ಟಿದ ನಾಡಿನಲ್ಲಿ' ಎಂಬ ಹೆಸರು ಔಚಿತ್ಯ ಪೂರ್ಣವಾಗಿದೆ.

ಸ್ವಾತಂತ್ರ್ಯನಂತರವು ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರ ಹಾಗೂ ಕರಿಯರ ನಡುವೆ ಇರುವ ಅಸಮಾನತೆಯನ್ನು ಸೂಕ್ಷ್ಮವಾಗಿ ಗಮನಿಸಿದ ವರ್ಣಭೇದದ ಅಸಮಾನತೆಯೊಂದಿಗೆ ನಮ್ಮ ಜಾತಿಭೇದವನ್ನು ತೌಲನೀಕರಿಸಿ ಚಿಂತನೆ ನಡೆಸಿದ್ದಾರೆ. ನಮ್ಮಲ್ಲಿರುವ ದಲಿತ ಸಮಸ್ಯೆಯನ್ನು ವಿಶ್ವ ಸಂಸ್ಥೆಯ ಮುಂದಿಟ್ಟು ಅದನ್ನು ಅಳಿಸಿ ಹಾಕಲು ಸರಕಾರೇತರ ಸಂಘ ಸಂಸ್ಥೆಗಳು ಪ್ರಯತ್ನ ಪಟ್ಟರೆ ಈ ರೀತಿಯ ಸಮಸ್ಯೆಯೇ ಇಲ್ಲವೆಂದು ಅದನ್ನು ಮುಚ್ಚಾಕಲೂ ಸರ್ಕಾರ, ಚೆಡ್ಡಿ ಬಣದವರ ಪ್ರಯತ್ನ, ಅದರಲ್ಲಿ ಸಫಲರಾಗಲು ಸರ್ಕಾರ ಹೆಣೆದ ಕುತಂತ್ರ, ನಮ್ಮ ದಲಿತ ನಾಯಕರ ದೌರ್ಬಲ್ಯ, ಮೂರ್ಖತನ ಇವುಗಳ ವಿರುದ್ಧ ಸತ್ಯ ಪ್ರತಿಪಾದನೆಗಾಗಿ ನಡೆದ ಹೋರಾಟಗಳ ಚಿತ್ರಣ ಈ ಕಥನದಲ್ಲಿದ್ದು ಇದರ ಜೊತೆಗೆ ಅಲ್ಲಿರುವ ಭಾರತೀಯರು ಯಾವುದೇ ಒಂದು ಕೋಮಿಗೆ ಸೇರದೆ ನಿಜವಾದ ಅರ್ಥದ ಭಾರತೀಯರಾಗಿರುವುದನ್ನು ಆದರೆ ಈ ಪರಿಸ್ಥಿತಿ ನಮ್ಮ ದೇಶದಲ್ಲಿ ನಿರ್ಮಾಣವಾಗದೇ ಇರುವುದಕ್ಕೆ, ಒಂದು ವೇಳೆ ನಿರ್ಮಾಣವಾದರು ಮತಾಂಧರು ಅದಕ್ಕೆ ಆಸ್ಪದವನ್ನು ನೀಡದಿರುವುದರ ಬಗ್ಗೆ ಖೇದ ವ್ಯಕ್ತವಾಗಿರುವುದನ್ನು ನೋಡಬಹುದು. ಜೊತೆಗೆ ದ್ವಾರಕಾನಾಥರ ಸೂಕ್ಷ್ಮ ಮಾನವತಾ ಸಂವೇದನೆಯ ಮನಸ್ಸನ್ನು ನಾವಿಲ್ಲಿ ಕಾಣಬಹುದಾಗಿದೆ. ಇಂದು ನಮ್ಮ ದೇಶೀಯರು ವರ್ತಕರಾಗಿ, ವಜ್ರದ ವ್ಯಾಪಾರಿಗಳಾಗಿ,

ಸರ್ಕಾರಿ ಕೆಲಸಗಳಲ್ಲಿದ್ದು ಉತ್ತಮ ಸ್ಥಿತಿಯಲ್ಲಿದ್ದಾರೆ. ಆದರೆ  ಇದೇ ನೆಲದವರಾದ ಕರಿಯರು ತಮ್ಮ ನೆಲದ ಹಕ್ಕುಗಳಿಂದ ವಂಚಿತರಾಗಿ ಕಡುಬಡವರಾಗಿ, ಬಿಳಿಯರ, ಭಾರತೀಯರ, ಕಲರ್ಡ್‌ಗಳ ನೆಲದಲ್ಲಿ ಕೂಲಿಗಳಾಗಿರುವ ವಿಪರ್ಯಾಸ ತೋರಿಸುತ್ತಾ ಒಂದು ಕಾಲದಲ್ಲಿ ಬಿಳಿಯ ರಿಂದ ಶೋಷಿತರಾದ ಭಾರತೀಯರು ಇಂದು ತಾವೇ ಶೋಷಕರಾಗಿರುವುದನ್ನು ಕಂಡು ಅವರ ಮನಸ್ಸು ಚಡಪಡಿಸುತ್ತದೆ. ಇವೆಲ್ಲವನ್ನು ಅವರ ಕೃತಿಯ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.

ದಕ್ಷಿಣ ಆಫ್ರಿಕಾದ ಪ್ರವಾಸ ಕಥನದ ನಂತರ ಬಂದದ್ದು 'ಅಮೆರಿಕಾ ಆ ಮುಖ' ಕೃತಿ. ಇದುವರೆಗೂ ಇರುವ ಅಮೆರಿಕಾ ಪ್ರವಾಸ ಕಥನಕ್ಕಿಂತಲೂ ಭಿನ್ನವಾದದ್ದು ಈ ಕೃತಿ. ಅಮೆರಿಕಾ ಹಾಗೂ ಆಫ್ರಿಕ ವಿಶ್ವ ನಾಗರಿಕ ಜಗತ್ತಿನ ಎರಡು ಧ್ರುವಗಳಾಗಿದ್ದರು ವರ್ಣಭೇದ ಮತ್ತು ಸಂಘರ್ಷದಲ್ಲಿ ಇವೆರಡೂ ಒಂದೇ. ಆ ದೃಷ್ಟಿಯಲ್ಲಿಯೇ ಅಮೆರಿಕಾದ ಪ್ರವಾಸವನ್ನು ದ್ವಾರಕಾನಾಥರು ಕಟ್ಟಿ ಕೊಟ್ಟಿದ್ದಾರೆ. ಈ ಕಥನವು ಒಂದು ರೀತಿ ದಕ್ಷಿಣ ಆಫ್ರಿಕಾ ಪ್ರವಾಸದ ಮುಂದುವರೆದ ಭಾಗದಂತಿದೆ.

ದಕ್ಷಿಣ ಆಫ್ರಿಕಾದಲ್ಲಿ ನಡೆದ ವರ್ಣಭೇದ, ಸಂಘರ್ಷದ ರೀತಿಯಲ್ಲಿಯೇ ಅಮೆರಿಕಾ ದಲ್ಲಿಯೂ ನೀಗ್ರೋ ಹಾಗೂ ಬಿಳಿಯರ ನಡುವೆ ವರ್ಣಭೇದ ಸಂಘರ್ಷಗಳು ನಡೆದವು. ಅಮೆರಿಕಾದಲ್ಲಿ ಕರಿಯರ ಮೇಲೆ ನಡೆದ ಹಲ್ಲೆ, ದೌರ್ಜನ್ಯಗಳು ಹಾಗೂ ಅದರ ವಿರುದ್ಧವಾಗಿ ಕರಿಯರು ನಡೆಸಿದ ಹೋರಾಟಗಳ ಸರಮಾಲೆಯನ್ನೇ ತಮ್ಮ ಪ್ರವಾಸ ಕಥನದುದ್ದಕ್ಕೂ ನೀಡುತ್ತಾರೆ. ಅಲ್ಲಿ ನಡೆದ ವರ್ಣಭೇದದ ಜೊತೆಗೆ ನಮ್ಮ ಜಾತಿಭೇದವನ್ನು ಸಮೀಕರಿಸಿ ನೋಡಿದ್ದಾರೆ. ಇಂದಿಗೂ ಅತ್ಯಂತ ಸೂಕ್ಷ್ಮವಾಗಿ ಹೇಗೆ ವರ್ಣಭೇದ ನಡೆಯುತ್ತಿದೆ ಎಂಬುದನ್ನು ಗುರುತಿಸಿದ್ದಾರೆ. ಇಲ್ಲಿಯೂ ದಕ್ಷಿಣ ಆಫ್ರಿಕಾದ ಭಾರತೀಯರಂತೆ ಎಲ್ಲ ಮತಧರ್ಮೀಯರು ಒಗ್ಗಟ್ಟಿನಿಂದಿರುವುದು, ಭಾರತದ ಅಖಂಡತೆಯನ್ನು ದೂರದ ಅಮೆರಿಕಾದಲ್ಲಿ ಕಾಪಾಡಿರುವುದನ್ನು ತಮ್ಮ ಕೃತಿಯಲ್ಲಿ ನಿದರ್ಶನದೊಂದಿಗೆ ನೀಡಿದ್ದಾರೆ. ಇಷ್ಟೆಲ್ಲಾ ಅಸಮಾನತೆಗಳ ನಡುವೆಯು ಕರಿಯರು ಮಾಡಿರುವ ಸಾಧನೆಯನ್ನು, ಅಂತ ಸಾಧಕರನ್ನು, ಅವರ ಸಾಧನೆಯ ಯಶೋಗಾಥೆಯನ್ನು ಹೇಳುತ್ತಾ ನಮ್ಮನ್ನು ಸಾರ್ಥಕ ಲೋಕಕ್ಕೆ ಕರೆದೊಯ್ಯುತ್ತಾರೆ. ತಾವು ಕಂಡ ಎಷ್ಟೋ ಸನ್ನಿವೇಶಗಳನ್ನು ಭಾರತದೊಂದಿಗೆ ಹೋಲಿಸುತ್ತಾ ನಮ್ಮ ದೇಶದಲ್ಲಿರುವ ಜೀವಂತಿಕೆಯನ್ನು ತೋರ್ಪಡಿಸುತ್ತಾ ಸಾಗುತ್ತಾರೆ. ನಾವು ತಿಳಿದಂತೆ ಅಮೆರಿಕಾ ಆರ್ಥಿಕವಾಗಿ ಅತ್ಯಂತ ಮುಂದುವರೆದ ದೇಶ. ಅದರ ನ್ಯಾಯಾಂಗ, ಶಾಸಕಾಂಗ ವ್ಯವಸ್ಥೆಯು ಅದ್ಭುತ ಆದರೂ ಇಲ್ಲಿಯೂ ನಮ್ಮ ದೇಶದಲ್ಲಿರುವಂತೆ ಭಿಕ್ಷುಕರಿದ್ದಾರೆಂಬುದನ್ನು ತಿಳಿಸುತ್ತಾ ನಾವುಗಳು ಇದುವರೆಗೂ ತಿಳಿಯದ ಅಮೆರಿಕಾದ ಮತ್ತೊಂದು ಮುಖದ ಪರಿಚಯ ಮಾಡಿಕೊಡುತ್ತಾರೆ.

ದ್ವಾರಕಾನಾಥ್ ಮೂಲತಃ ಪ್ರತಿರೋಧ ಸಂವೇದನೆಯ ಕ್ರಿಯಾಶೀಲ ಲೇಖಕ. ಜಗತ್ತಿನ ಎಲ್ಲ ನೊಂದವರ ದನಿಯನ್ನು ಗ್ರಹಿಸುವ ವಿವೇಕ ಅವರಲ್ಲಿರುವುದರಿಂದ ಅವರ ಪ್ರವಾಸ ಕಥನ

ನೊಂದವರ ದನಿಯಾಗಿದೆ.

ಈ ಕಥನವನ್ನು ಓದುತ್ತ ಸಂವೇದನ ರಹಿತನಾದವನು ಸಂವೇದನೆಗೆ ಒಳಗಾಗಿ, ಅವನಲ್ಲಿ ಅಡಗಿರುವ ಮನುಷ್ಯತ್ವ ಜಾಗೃತಗೊಳ್ಳುತ್ತದೆ.

ಇನ್ನು ಇವರ ಭಾಷಾ ಶೈಲಿ ವೇಗವಾಗಿ ಸಂಚರಿಸುವ ವಾಹನದಂತೆ ಲವಲವಿಕೆಯಿಂದ ಕೂಡಿದ ಗದ್ಯವಾಗಿದೆ. ಯಾವುದನ್ನು ವೈಭವೀಕರಿಸದೇ ನೇರವಾದ ಸತ್ಯಕ್ಕೆ ಹತ್ತಿರವಾದ ನಿರೂಪಣೆಯೊಂದಿಗೆ ಇವರ ಕಥನವಿದೆ. ಸರಸವಾದ ತುಂಟ ಶೈಲಿಯ ಜೊತೆಗೆ ಸೂಕ್ಷ್ಮ ಪ್ರೌಢಿಮೆಯನ್ನು ಒಳಗೊಂಡಿದೆ. ಸೂಕ್ಷ್ಮ ಸಂವೇದನೆಯ ಕವಿಯಂತೆ ಕಾಣುತ್ತಾರೆ.

ಈ ಎರಡೂ ಪ್ರವಾಸ ಕಥನಗಳು ಕತೆ, ಪ್ರಬಂಧ, ಆತ್ಮಚರಿತ್ರೆಯ ಲಕ್ಷಣಗಳನ್ನೂ ಒಳಗೊಂಡಿವೆ. ಇದು ಶತಶತಮಾನಗಳಿಂದ ಭೇದದ ಬೇಗುದಿಯಲ್ಲಿ ಬೆಂದ ಜನರ ದನಿಯಾಗುವುದರ ಜೊತೆ ಇನ್ನೂ ಉಳಿದುಕೊಂಡು ಬಂದಿರುವ ಸಮಸ್ಯೆಯ ಬಗೆಗೆ ಕಣ್ತೆರೆಸುವ ಬರವಣಿಗೆಯಾಗಿದೆ; ಸಮಾಜ ಮುಖಿಯಾಗಿದೆ. ಇನ್ನೊಂದು ಮಾತು ದ್ವಾರಕಾನಾಥರು ಅಮೆರಿಕಾವನ್ನು ನೋಡುವ ಈ ದೃಷ್ಟಿಗೆ ಬದಲಾದ ಕಾಲ ಮತ್ತು ಅವರ ಜೀವನ ದೃಷ್ಟಿಕೋನವೇ ಕಾರಣ.

# 9- ಅನುಬಂಧ

## ಆಕರ ಗ್ರಂಥಗಳು

1. ಅಮೆರಿಕಾ ಆ ಮುಖ- ಡಾ ಸಿ.ಎಸ್. ದ್ವಾರಕಾನಾಥ್, ಲಡಾಯಿ ಪ್ರಕಾಶನ, ಗದಗ.
2. ಗಾಂಧಿ ಮೆಟ್ಟಿದ ನಾಡಿನಲ್ಲಿ - ಡಾ ಸಿ.ಎಸ್. ದ್ವಾರಕಾನಾಥ್, ಪ್ರೆಸ್‌ಕ್ಲಬ್ ಪ್ರಕಾಶನ ಕಬ್ಬನ್ ಪಾರ್ಕ್ ಬೆಂಗಳೂರು.

## ಪರಾಮರ್ಶನ ಗ್ರಂಥಗಳು

1. ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ; ಪ್ರಧಾನ ಸಂಪಾದಕರು ಪ್ರೊ.ಎಲ್.ಎಸ್. ಶೇಷಗಿರಿರಾವ್, ಉದಯ ಭಾನು ಕಲಾ ಸಂಘ, ಕೆಂಪೇಗೌಡ ನಗರ, ಬೆಂಗಳೂರು 1993.
2. ಸಾಹಿತ್ಯ ವಾರ್ಷಿಕ 1971- ಬೆಂಗಳೂರು ವಿಶ್ವವಿದ್ಯಾಲಯ.
3. ಕನ್ನಡ ವಾರ್ಷಿಕ 1994, ಸಂ ಡಾ. ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
4. ಪಂಪಾಯಾತ್ರೆ- ವಿ. ಸೀತಾರಾಮಯ್ಯ, ರೋಹಿಣಿ ಪ್ರಿಂಟರ್ಸ್, ಅರಳೇಪೇಟೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂ-50 (1990).
5. ಅಮೆರಿಕದಲ್ಲಿ ನಾನು, ಶಾಂತಿ - ಪ್ರಭುಶಂಕರ್.
6. ಅಪರ ವಯಸ್ಕನ ಅಮೆರಿಕಾ ಯಾತ್ರೆ- ಎ.ಎನ್. ಮೂರ್ತಿರಾಯರು, ಡಿ.ವಿ.ಜಿ. ಮೂರ್ತಿ ಕೃಷ್ಣಮೂರ್ತಿ ಪುರಂ, ಮೈಸೂರು 4 (1979)
7. ಅಪೂರ್ವ ಪಶ್ಚಿಮದಲ್ಲಿ - ಕಾರಂತರು, ರಾಜಲಕ್ಷ್ಮಿ ಪ್ರಕಾಶನ, ಬೆಂ (1977)
8. ಕನ್ನಡ ಸಾಹಿತ್ಯ ಸಮೀಕ್ಷೆ - 1991, ಎಸ್. ವಿದ್ಯಾಶಂಕರ, ಕರ್ನಾಟಕ ಸಾಹಿತ್ಯ ಅಕಾಡೆಮಿ 1992.
9. ಭಾರತದಲ್ಲಿ ಪ್ರವಾಸೋದ್ಯಮ ಚರಿತ್ರೆ- ಸ್ಟೀವನ್ ಕ್ವಾಡ್ರಸ್, ಚೇತನ ಬುಕ್ ಹೌಸ್.
10. ಸಾಹಿತ್ಯ ವಾರ್ಷಿಕ -1974 ಬೆಂ.ವಿ.ವಿ.
11. ಸಾಹಿತ್ಯ ವಾರ್ಷಿಕ- 1972 ಬೆಂ.ವಿ.ವಿ.
12. ಪ್ರವಾಸ ಸಾಹಿತ್ಯ, ಎನ್.ಎಸ್. ತಾರಾನಾಥ, ಶಕ್ತಿ ಪ್ರಕಾಶನ (1990).
13. ಹೊಸಗನ್ನಡದ ಅರೊಣೋದಯ ; ಶ್ರೀನಿವಾಸ ಹಾವನೂರು, ಮೈಸೂರು 1974.
14. ಪ್ರವಾಸ ಸಾಹಿತ್ಯ ; ಡಾ. ಲತಾಗುತ್ತಿ, ಸಚ್ಚಿನ್‌ಪಬ್ಲಿಕೇಷನ್ಸ್, ಬೆಂ. ವಿಶ್ವ ಸಂಸ್ಕೃತಿಗಳು.
15. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ; ಶ್ರೀ ಜಿ.ಎಸ್. ವಡಗಾಂವಿ, ಕರ್ನಾಟಕ ವಿಶ್ವವಿದ್ಯಾಲಯ 1979.

16. ಪ್ರವಾಸ ಸಾಹಿತ್ಯ ; ಸಿ.ಪಿ.ಕೆ. ಮಲ್ಲೇಪುರಂ ವೆಂಕಟೇಶ್, ಕನ್ನಡ ವಿಶ್ವವಿದ್ಯಾಲಯ, ಹಂಪಿ

17. ಪ್ರವಾಸ ಸಾಹಿತ್ಯ ಒಂದು ಅಧ್ಯಯನ ; ಸಂ. ಮಲ್ಲೇಪುರಂ, ಜಿ. ವೆಂಕಟೇಶ್, ಹೊನ್ನ ಪ್ರಕಾಶನ, ಬೆಂಗಳೂರು 1992.

18. ಪ್ರವಾಸ ಸಾಹಿತ್ಯ : ಪ್ರಬುದ್ಧ ಕರ್ನಾಟಕ ವರದರಾಜ ಹುಯಿಲಗೋಳ, ಪ್ರಬುದ್ಧ ಕರ್ನಾಟಕ ಬೆಂಗಳೂರು.

19. ಪ್ರವಾಸ ಸಾಹಿತ್ಯ : ಕನ್ನಡ ನುಡಿ ಸಾ.ಶಿ. ಮರುಳಯ್ಯ

20. ಜೀವನದಿ ; ಡಾ. ಗೀತಾಪ್ರಸಾದ್, ಧಾತ್ರಿಪುಸ್ತಕ, ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು

21. ಅಮೆರಿಕದಲ್ಲಿ ನಾನು ; ಬಿ.ಜಿ.ಎಲ್. ಸ್ವಾಮಿ ಕಾವ್ಯಾಲಯ ಪ್ರಕಾಶನ, ಜಯನಗರ ಮೈಸೂರು.

22. ಅಮೆರಿಕಾದಲ್ಲಿ ಗೊರೂರು ; ಗೊರೂರು ರಾಮಸ್ವಾಮಿ ಅಯ್ಯಂಗಾರ್ ; ಐಬಿಎಚ್ ಪ್ರಕಾಶನ, ಬೆಂಗಳೂರು.

23. ಅಸ್ಮಿತೆ - ಡಾ. ಎಸ್. ಪ್ರಸಾದಸ್ವಾಮಿ, ಕಣ್ವ ಪಬ್ಲಿಕೇಷನ್, ಬೆಂಗಳೂರು.

24. ಗೋಳದ ಮೇಲೊಂದು ಸುತ್ತು ; ಟಿ.ಕೆ. ರಾಮರಾವ್, ಧೃತಿ ಪ್ರಕಾಶನ, ನ.ರಾ. ಕಾಲೋನಿ, ಬೆಂಗಳೂರು.